ಶೈಕ್ಷಣಿಕ

# ತತ್ವದರ್ಶನ




ಲೇಖಕರು :

ಎಸ್. ವ್ಹಿ. ಪಾಟೀಲ, ಎಂ. ಎ., ಬಿ. ಟಿ., ಎಲ್‌ಎಲ್. ಬಿ.

ಪ್ರಿನ್ಸಿಪಾಲ, ಶ್ರೀ ಸಿದ್ಧೇಶ್ವರ ಹಾಯಸ್ಕೂಲ, ವಿಜಾಪೂರ





ಪ್ರಕಾಶಕರು :

ಶಂಭುಲಿಂಗಪ್ಪ ಶಿವರುದ್ರಪ್ಪ ಕುಲಕರಣಿ

ಅಡಿಕೆ ಓಣಿ, ಧಾರವಾಡ

೧೯೫೯ ] [ ೧-೪-೦

C2714 CR

# ಮುನ್ನುಡಿ

ಡಾ. ಟಿ. ಪಿ. ನನ್ ಈ ಆಂಗ್ಲ ಶಿಕ್ಷಣ-ತಜ್ಞರು ಬರೆದ ಶಿಕ್ಷಣ ತತ್ವದರ್ಶನ ಗ್ರಂಥವಾದ "Education, Its Data and First Principles" ಇದನ್ನು ಪದವೀಧರ ಶಿಕ್ಷಕರ ತರಬೇತಿ ಕೇಂದ್ರಗಳಲ್ಲಿಯ ಎಲ್ಲ ಶಿಕ್ಷಕರು ಓದಿ, ಅರಗಿಸಿ ಕೊಳ್ಳಲೇಬೇಕೆಂಬುದನ್ನು ಎಲ್ಲ ಶಿಕ್ಷಣಶಾಸ್ತ್ರದ ಶ್ರೇಷ್ಠ ಪ್ರಾಧ್ಯಾಪಕರು ಅನಂತಕಾಲ ದಿಂದಲೂ ಉಪದೇಶಿಸುತ್ತ ಬಂದುದು ಮಾರ್ಮಿಕವಾದ ಸತ್ಯ ಸಂಗತಿಯಾಗಿದೆ. ಅದರ ತಥ್ಯಾಂಶವೆಂದರೆ ಡಾ. ಟಿ. ಪಿ. ನನ್‌ರ ಗ್ರಂಥವನ್ನು ಓದಿ ಮಾನವತೆಯ ಮಹಾಪ್ರಭಾವವನ್ನು ಬೀರುವ ಮೂಲಭೂತ ಮತ್ತು ಶಾಶ್ವತವಾದ ತತ್ವಗಳನ್ನು ಅರಗಿಸಿಕೊಂಡ ಶಿಕ್ಷಕರು ಪುನೀತರಾಗುವದರಲ್ಲಿ ಸಂದೇಹವಿಲ್ಲ. ಡಾ. ನನ್‌ರು ಪ್ರತಿಪಾದಿ ಸಿದ ತತ್ವಗಳನ್ನು ಜಾಗತಿಕ ತಜ್ಞರು ಒಪ್ಪಿಕೊಂಡಿದ್ದು, ಅವು ಮೂಲಶಿಕ್ಷಣ ಪ್ರಣಾಲಿಯ ಹಿನ್ನೆಲೆಯಾಗಿರುವ ತತ್ವಗಳೂ ಆಗಿವೆ.

ಮಾಧ್ಯಮಿಕ ಶಾಲೆಯ ಶಿಕ್ಷಕರು ಈ ಮಹಾಗ್ರಂಥವನ್ನು ಓದಿ ಅರಗಿಸಿಕೊಳ್ಳು ವದೇ ದುಸ್ತರವಾದಾಗ, ಪ್ರಾಥಮಿಕ ಶಾಲೆಗಳ ಶಿಕ್ಷಕರಿಗೆ ಡಾ. ನನ್‌ರ ಅಮೋಘ ವಿಚಾರಗಳ ಪರಿಚಯ ಆಗಿಲ್ಲವೆಂದೇ ಹೇಳಬಹುದು. ಈ ಪರಿಸ್ಥಿತಿಯಲ್ಲಿ ಶ್ರೀ ಎಸ್. ವ್ಹಿ. ಪಾಟೀಲರು ಆ ಮಹಾ ಗ್ರಂಥವನ್ನು ಮನಮುಟ್ಟಿ ಓದಿ ಅರಗಿಸಿಕೊಂಡು, ತಮ್ಮದೇ ಆದ ಸರಳ ಶೈಲಿಯಲ್ಲಿ ಆ ಗ್ರಂಥದ ಶಿಕ್ಷಣ ತತ್ವದರ್ಶನದ ಬಗ್ಗೆ ಬರೆದು ಟ್ರೇನಿಂಗ ಕಾಲೇಜಿನ ಶಿಕ್ಷಕ ವಿದ್ಯಾರ್ಥಿಗಳಿಗೆ ಒಂದು ಮಹದುಪಕಾರವನ್ನೇ ಮಾಡಿದ್ದಾರೆ.

ಆದರೆ ಇದು ಶಿಕ್ಷಕರಿಗಷ್ಟೇ ಮೀಸಲಾಗಿಟ್ಟ ಗ್ರಂಥವಾಗಿರದೆ ಎಲ್ಲ ಸುಶಿಕ್ಷಿತರೂ ಶಿಕ್ಷಣಪ್ರೇಮಿಗಳೂ ಅತ್ಯಂತ ಆವಶ್ಯಕವಾಗಿ ಓದಿ ನಮ್ಮ ರಾಷ್ಟ್ರದ ಶೈಕ್ಷಣಿಕ ರಂಗ ದಲ್ಲಿಯ ಅನೇಕ ಮಾರ್ಮಿಕ ಮತ್ತು ಚರ್ಚಾತ್ಮಕ ಸಮಸ್ಯೆಗಳಿಗೆ ಅತ್ಯಂತ ಸಮಾಧಾನಕಾರಕವಾದ ಉತ್ತರಗಳನ್ನು ಪಡೆಯಬಹುದು.

ಈ ಪುಸ್ತಕವನ್ನು ಬರೆದ ರೀತಿ, ಭಾಷೆ, ವಿಷಯ ವಿವೇಚನೆಗಳು ಸಾಮಾನ್ಯ ರಿಗೂ ತಿಳಿಯುವಂತೆ ಸರಳವಾಗಿವೆ. ಯಾವತ್ತೂ ಶಿಕ್ಷಣ ಪ್ರೇಮಿಗಳಿಗೆ ಇದು ನೆರವಾಗುವದರಲ್ಲಿ ಸಂದೇಹವಿಲ್ಲ. ಪ್ರಾಥಮಿಕ ಶಾಲಾ ಶಿಕ್ಷಕರಿಗಂತೂ ಇದು ಕೈಗನ್ನಡಿಯಂತಿದೆ.

G. B. Mench, M. A., B. T.

ಪ್ರಿನ್ಸಿಪಾಲರು

ಎಸ್. ಎಸ್. ಟ್ರೇನಿಂಗ ಕಾಲೇಜು, ಲಚ್ಯಾಣ

# ಪ್ರಸ್ತಾವನೆ

ಸರ್ **ಟಿ. ಪಿ. ನನ್** ಇವರು ಆಧುನಿಕ ಆಂಗ್ಲ ಶಿಕ್ಷಣ ಪದ್ಧತಿಯ ಪಿತಾಮಹರಲ್ಲೊಬ್ಬರು. ಅವರು ಬರೆದ "Education— Its Data and First Principles." ಎಂಬ ಉದ್ಗ್ರಂಥದ ಆಧಾರದ ಮೇಲೆ ಈ ಪುಸ್ತಕವನ್ನು ಬರೆಯಲಾಗಿದೆ. ಆದರೆ ಎಲ್ಲೆಡೆಯಲ್ಲಿಯೂ ಅವರ ವಿಚಾರ ಸರಣಿಯನ್ನೇ ಅನುಸರಿಸಲು ಸಾಧ್ಯವಾಗಿಲ್ಲ. ವಿಷಯ ಜೋಡಣೆಯಲ್ಲಿಯೂ ಬಹಳ ಮಾರ್ಪಾಟುಗಳನ್ನು ಮಾಡಿಕೊಳ್ಳಲಾಗಿದೆ. ಮಾನಸ ಶಾಸ್ತ್ರದ ಗಡುಚಾದ ಸಂಗತಿಗಳೆಲ್ಲವನ್ನೂ ಬಿಟ್ಟುಕೊಟ್ಟು ಕೇವಲ ಶೈಕ್ಷಣಿಕ ತತ್ವಗಳನ್ನಷ್ಟೇ ಇಲ್ಲಿ ಪರಿಶೀಲಿಸಲಾಗಿದೆ. ಏಕೆಂದರೆ, ಈ ಪುಸ್ತಕದಲ್ಲಿ ವಾದಿಸಿದ ತತ್ವಗಳು ಕೇವಲ ಶಿಕ್ಷಕರಿಗೆ ಮಾತ್ರ ಸಂಬಂಧಿಸಿಲ್ಲ. ಜನಸಾಮಾನ್ಯರೂ ಸಹ ತಿಳಿದುಕೊಳ್ಳಲೇಬೇಕಾದ ಅನೇಕ ಸಂಗತಿಗಳು ಇದರಲ್ಲಿ ಅಡಕವಾಗಿವೆ. "ಮಾನವನು ದೈವದ ಕೈಗೊಂಬೆಯಲ್ಲ, ಇಲ್ಲವೆ ಪರಿಸ್ಥಿತಿಯ ಚಲ್ಲಾಟದಲ್ಲಿ ಸಿಕ್ಕ ಜಡವಸ್ತುವಲ್ಲ. ಅವನು ತನ್ನ ಪ್ರಗತಿ ಮತ್ತು ಅಧೋಗತಿಗಳೆರಡನ್ನೂ ತಾನೇ ನಿರ್ಧರಿಸಬಲ್ಲನು."— ಎಂದು ನಂಬುವ ಕನ್ನಡಿಗರೆಲ್ಲರೂ ಈ ಸಂಗತಿಗಳನ್ನು ಗಮನಿಸಬೇಕು. ಅವರು ಶಿಕ್ಷಣರಂಗದಲ್ಲಿ ಪೂರ್ಣ ತಿಳುವಳಿಕೆಯಿಂದ ಮುನ್ನಡೆಯುವ ಕಾಲವು ಇಂದು ಒದಗಿದೆ.

ಈ ಪುಸ್ತಕಕ್ಕೆ ಮುನ್ನುಡಿ ಬರೆದುಕೊಟ್ಟ ಪ್ರಿನ್ಸಿಪಾಲ ಜಿ ಬಿ. ಮೆಂಚರವರಿಗೂ ಮತ್ತು ಇದರ ಪ್ರಕಾಶನದ ಹೊಣೆ ತೆಗೆದುಕೊಂಡ ಶ್ರೀಯುತ ಎಸ್. ಎಸ್. ಕುಲಕರಣಿಯವರಿಗೂ ನಾನು ಅತ್ಯಂತ ಕೃತಜ್ಞನಿದ್ದೇನೆ.

ವಿಜಯಪುರ
೧೦-೪-೧೯೫೩

**ಎಸ್. ವ್ಹಿ. ಪಾಟೀಲ**

# ಅನುಕ್ರಮಣಿಕೆ



ಮುದ್ರಕರು: ಶ್ರೀ ಎಮ್. ಎಸ್. ಕುಲಕರ್ಣಿ, ಗೌರೀಶ ಪ್ರೆಸ್, ಧಾರವಾಡ.

# ಶೈಕ್ಷಣಿಕ ತತ್ತ್ವದರ್ಶನ

## ೧. ಶಿಕ್ಷಣದ ಗುರಿ

ಒಂದಿಲ್ಲ ಒಂದು ರೀತಿಯಿಂದ ಒಳಿತನ್ನುಂಟುಮಾಡುವುದೇ ಪ್ರತಿಯೊಂದು ಕಲೆಯ ಗುರಿ. ಶಿಕ್ಷಣವೂ ಒಂದು ಕಲೆ. ಅಂದಮೇಲೆ ಈ ಕಲೆಯು ಸಾಧಿಸಬಲ್ಲ ಗುರಿಯಾವುದು ? ಈ ಪ್ರಶ್ನೆಗೆ ಕೊಟ್ಟ ಧೈರ್ಯದ ಉತ್ತರಗಳಿಗೇನೂ ಕೊರತೆಯಿಲ್ಲ.

### ೧. ಸಂದೇಹಾತ್ಮಕ ಗುರಿಗಳು

ಬಾಲಕರಲ್ಲಿ ಉತ್ತಮ ಶೀಲವನ್ನು ಉಂಟುಮಾಡುವುದು ಶಿಕ್ಷಣದ ಉದ್ದೇಶವೆಂದು ಕೆಲವರು ಹೇಳಿದ್ದಾರೆ. ಪರಿಪೂರ್ಣ ಜೀವನದ ಸಲುವಾಗಿ ಬಾಲಕರನ್ನು ತರಬೇತುಗೊಳಿಸುವುದು ಶಿಕ್ಷಣದ ಉದ್ದೇಶವೆಂದು ಇನ್ನು ಕೆಲವರು ಹೇಳಿದ್ದಾರೆ. ದೃಢ ಕಾಯದಲ್ಲಿ ಸ್ಥಿರಚಿತ್ತವನ್ನು ಬಿಂಬಿಸುವುದು ಶಿಕ್ಷಣದ ಉದ್ದೇಶವೆಂದು ಇನ್ನೂ ಅದೆಷ್ಟೋ ಜನರು ಹೇಳಿದ್ದಾರೆ. ಇಂತಹ ಉತ್ತರಗಳ ಸರಪಳಿಯನ್ನು ಹೀಗೆಯೇ ಮುಂದುವರಿಸಬಹುದು. ಆದರೆ, 'ಉತ್ತಮ ಶೀಲದ' ಗುರಿಯನ್ನಿಟ್ಟುಕೊಂಡವರಿಗೆ 'ಎಂತಹ ಶೀಲವನ್ನುಂಟು ಮಾಡುವುದು ಒಳಿತು ?' ಎಂದು ಕೇಳಿದಾಗ ಅವರು ಬೇರೆ ಬೇರೆ ಉತ್ತರ ಗಳನ್ನು ಕೊಡುವುದು ನಿಶ್ಚಿತ. ಏಕೆಂದರೆ, ಒಬ್ಬ ಸನಾತನಿಗೆ ಪುರಾತನ ಆರ್ಯ ಸಂಸ್ಕೃತಿಗೆ ಒಪ್ಪುವ ಶೀಲವು ಉತ್ತಮವೆಂದು ಕಂಡುಬಂದರೆ, ಅದೇ ಶೀಲವು ಒಬ್ಬ ಆಧುನಿಕ ಪಾಶ್ಚಿಮಾತ್ಯ ಸಂಸ್ಕೃತಿಯ ಪುರಸ್ಕರ್ತನಿಗೆ ಹಾಸ್ಯಾಸ್ಪದವಾಗಿ ತೋರಬಹುದು. 'ಪರಿಪೂರ್ಣ ಜೀವನದ' ಗುರಿಯನ್ನಿ

ಟ್ಟುಕೊಂಡವರಿಗೆ ' ಪರಿಪೂರ್ಣ ಜೀವನದ ಚಟುವಟಿಕೆಗಳಾವುವು ? ' ಎಂದು ಕೇಳಿದಾಗ ಅವರಲ್ಲಿಯೂ ಭಿನ್ನಾಭಿಪ್ರಾಯ ತಲೆದೋರುವುದು ನಿಶ್ಚಿತ. ಏಕೆಂದರೆ ಮನೆ-ಮಕ್ಕಳು-ಕುಟುಂಬ-ಸಮಾಜ-ಧರ್ಮ ಮೊದಲಾದ ಲೌಕಿಕ ವಸ್ತುಗಳನ್ನು ಉಪಭೋಗಿಸುವ ಜೀವನವೇ ಪರಿಪೂರ್ಣ ಜೀವನವೆಂದು ಒಬ್ಬ ಗೃಹಸ್ಥನು ಗೃಹಿಸಿದರೆ, ಅದೇ ಜೀವನವೇ ಒಬ್ಬ ಸನ್ಯಾಸಿಯ ದೃಷ್ಟಿಯಲ್ಲಿ ನಿಸ್ಸಾರವಾದುದೆಂದು ತೋರಬಹುದು. ಇದರಂತೆ 'ಸ್ಥಿರಚಿತ್ತದ ಗುರುತುಗಳಾವವು?' ಎಂದು ಕೇಳಿದಾಗ ಪುನಃ ಪ್ರತಿಯೊಬ್ಬನ ವಿಚಾರವೂ ಬೇರೆ ಬೇರೆಯಾಗಿದ್ದುದು ಕಂಡುಬರುವುದು. ಏಕೆಂದರೆ, ಸ್ಥಿರಚಿತ್ತದಿಂದ ಕೂಡಿದ ದೃಢಕಾಯವೆಂದು ಒಬ್ಬನು ಒಂದು ವ್ಯಕ್ತಿಯನ್ನು ಪೂಜಿಸುತ್ತಿದ್ದರೆ, ಅವನನ್ನೇ ಇನ್ನೊಬ್ಬನು ಪಶುವಿನ ಮನಸ್ಸಿನಿಂದ ತುಂಬಿದ ಕಾಡು ದೇಹವೆಂದು ತಿರಸ್ಕರಿಸುತ್ತಿರಬಹುದು. ಈ ಬಗೆಯಾಗಿ ಪ್ರತಿಯೊಂದು ಗುರಿಯೂ ಭಿನ್ನಾಭಿಪ್ರಾಯಗಳಿಗೆ ಕಾರಣವಾದರೆ, ಎಲ್ಲರಿಗೂ ಒಪ್ಪಿಗೆಯಾಗುವಂತೆ ಶಿಕ್ಷಣದ ಒಂದೇ ಒಂದು ಗುರಿಯನ್ನು ರೂಪಿಸುವುದು ಸಾಧ್ಯವೋ? —ಎಂದು ಹಲವು ವಿಚಾರಪರರು ಸಂದೇಹಪಡಬಹುದು.

## ೨. ಭಿನ್ನ ದೃಷ್ಟಿಕೋನಗಳು

ಶಿಕ್ಷಣದ ಗುರಿಗಳಲ್ಲಿಯ ಈ ಭಿನ್ನತೆಗಳ ಕಾರಣವನ್ನು ಕಂಡುಹಿಡಿಯುವುದು ಸುಲಭ. ಪ್ರತಿಯೊಂದು ಶೈಕ್ಷಣಿಕ ಯೋಜನೆಯೂ ಒಂದು ವ್ಯಾವಹಾರಿಕ ತತ್ವದ ಮೇಲೆ ನಿಂತಿರುತ್ತದೆ. ಬೇರೆ ಬೇರೆ ಆದರ್ಶಗಳನ್ನು ಅನುಸರಿಸುವ ಜನರು ಬೇರೆ ಬೇರೆ ಬಗೆಯ ಶೈಕ್ಷಣಿಕ ಯೋಜನೆಗಳನ್ನು ರೂಪಿಸಿಕೊಂಡಿದ್ದಾರೆ. ಇತಿಹಾಸದಲ್ಲಿ ಈ ಮಾತಿಗೆ ಅನೇಕ ನಿದರ್ಶನಗಳಿವೆ. ವೇದಕಾಲದ ಜೀವನ ದೃಷ್ಟಿ ಒಂದು ಬಗೆಯಾಗಿತ್ತು. ಆ ಜೀವನ ದೃಷ್ಟಿಯಿಂದ ಒಂದು ವಿಶಿಷ್ಟ ಬಗೆಯ ಶೈಕ್ಷಣಿಕ ಯೋಜನೆಯು ರೂಪುಗೊಂಡಿತ್ತು. ಆಧುನಿಕ ಯುರೋಪಿನ ಜೀವನ ದೃಷ್ಟಿ ಇನ್ನೊಂದು ಬಗೆಯಾಗಿದೆ. ಆ ಜೀವನ ದೃಷ್ಟಿಯಿಂದ ಉದ್ಭವಿಸಿದ ಶೈಕ್ಷಣಿಕ ಯೋಜನೆಯು ಸಹ ಬೇರೊಂದು ಬಗೆಯಾಗಿದೆ. ಹೀಗೆ ಪರಸ್ಪರ ಭಿನ್ನ ಆದರ್ಶಗಳಿಂದ ಉದ್ಭವಿಸಿದ ಶಿಕ್ಷಣದ ರೀತಿ ನೀತಿಗಳಲ್ಲಿ ಭಿನ್ನತೆಗಳಿರುವುದು ಸಹಜ.

ವಿರೋಧಾತ್ಮಕ ದೃಷ್ಟಿಕೋನಗಳಿಂದ ಉದ್ಭವಿಸಿದ ಶಿಕ್ಷಣದ ವಿಚಾರಗಳಲ್ಲಿ ಸಾಮರಸ್ಯವನ್ನು ಹುಡುಕುವುದು ಅನಾವಶ್ಯಕ.

## ೩. ದ್ವಿರೂಪಿ ಮನುಷ್ಯ ಸ್ವಭಾವ

ಮಾನವನ ಗಡುಚಾದ ಸ್ವಭಾವದಲ್ಲಿ ಈ ಭಿನ್ನತೆಯ ಮೂಲವು ಅಡಗಿದೆ. ಮಾನವನ ಸ್ವಭಾವವು ಮೂಲತಃ ದ್ವಿರೂಪಿಯಾಗಿದೆ. ಒಂದು ದೃಷ್ಟಿಯಿಂದ ನೋಡಿದರೆ ಜನರು ಒಬ್ಬರಿಂದೊಬ್ಬರು ಬೇರ್ಪಡಿಸಲ್ಪಟ್ಟವರಂತೆ ತೋರುತ್ತಾರೆ. ನನ್ನ ಜೀವವು ನಿನ್ನ ಜೀವದ ಸಂಗಡ ಪರಸ್ಪರ ತಿಳುವಳಿಕೆ ಯನ್ನುಂಟುಮಾಡಿಕೊಳ್ಳಬೇಕಾದರೆ, ನೇರವಾದ ಮಾರ್ಗವಿಲ್ಲ. ಕೇವಲ ನಮ್ಮ ತುಟಿಗಳಿಂದ ಹೊರಬೀಳುವ ಶಬ್ದಗಳಿಂದ ಇಲ್ಲವೆ ನಮ್ಮ ಬೆರಳುಗಳು ಚಿತ್ರಿಸುವ ಗುರುತುಗಳಿಂದ ಮಸು ಮಸುಕಾದ ಪರಸ್ಪರ ಜ್ಞಾನವನ್ನು ಅವು ಮಾಡಿಕೊಳ್ಳಬಲ್ಲವು. ಆದರೆ ಆ ಎರಡೂ ಜೀವಗಳಿಗೆ ನೇರವಾದ ಹೊಂದಿಕೆಯಿಲ್ಲ. ಇಲ್ಲವೆ ನಿಕಟವಾದ ಸಹವಾಸವಿಲ್ಲ. ಅಂತೆಯೇ ಕೊನೆಯ ವರೆಗೆ ನೀನು ನೀನೇ, ನಾನು ನಾನೇ! ಆದರೂ ಇನ್ನೊಂದು ದೃಷ್ಟಿಯಿಂದ ನೋಡಿದರೆ ಜನರು ಒಬ್ಬರನ್ನೊಬ್ಬರು ನಿಜವಾಗಿಯೂ ಹೋಲುವಂತೆ ಭಾಸವಾಗುತ್ತಾರೆ. ನಾವು ಈ ಜಗತ್ತಿನಲ್ಲಿ ಜನ್ಮವೆತ್ತಿದಾಗ ನಮ್ಮ ದೇಹಗಳು ಬತ್ತಲೆಯಾಗಿರುತ್ತವೆ. ಬಹುಶಃ ನಮ್ಮ ಮನಸ್ಸಿನ ಆಳವಾ ದರೂ ಅಷ್ಟೇ ಬರಿದಾಗಿರುತ್ತದೆ. ಎರಡನೆಯವರ ಕೈಗಳು ತೊಡಿಸಿದ ಉಡಿಗೆ-ತೊಡಿಗೆಗಳಿಂದ ನಮ್ಮ ದೇಹಗಳು ಶೋಭಿಸುವಂತೆ, ನಮ್ಮ ಮಾನಸಿಕ ಜೀವನವಾದರೂ ಎರಡನೆಯ ಜೀವಗಳು ಒದಗಿಸುವ ವಿಚಾರ ಗಳಿಂದ ಪರಿಪೂರ್ಣತೆಯನ್ನು ಪಡೆಯುತ್ತವೆ. ಈ ಬಗೆಯ ಸಹಾಯಗಳಿರದಿ ದ್ದರೆ ನಾವು ಜೀವಿಸುವುದು ದುಸ್ತರ; ಒಂದು ವೇಳೆ ಜೀವಿಸಲು ಸಾಧ್ಯ ವಾದರೂ ಮಾನವತೆಯ ಮಟ್ಟವನ್ನು ಮುಟ್ಟುವುದು ದುಸ್ತರ.

## ೪. ಎರಡು ಭಿನ್ನ ತತ್ವಗಳು

ಮನುಷ್ಯನ ಈ ದ್ವಿರೂಪಿ ಸ್ವಭಾವವನ್ನು ಪೂರ್ಣವಾಗಿ ಅರ್ಥ ಮಾಡಿ ಕೊಳ್ಳದೆ ಹಲವು ಸಲ ಜನರು ತಾತ್ವಿಕವಾಗಿ ಮಾತನಾಡುವುದುಂಟು. ಒಬ್ಬರು ಈ ಸ್ವಭಾವದ ಒಂದು ಅಂಶವನ್ನು ಅತಿಶಯೋಕ್ತಿಯಿಂದ ಬಣ್ಣಿಸಿ

ದರೆ, ಇನ್ನೊಬ್ಬರು ಇನ್ನೊಂದು ಅಂಶವನ್ನು ಅತಿಶಯೋಕ್ತಿಯಿಂದ ಬಣ್ಣಿಸುತ್ತಾರೆ. ಕೆಲವು ಸಮಾಜ ಶಾಸ್ತ್ರಜ್ಞರು "ಸಮಾಜವನ್ನು ವ್ಯಕ್ತಿಯು ನಿರ್ಮಿಸಿದ್ದಾನೆ" ಎಂದು ಹೇಳಿದ್ದಾರೆ. ಇನ್ನು ಕೆಲವರು 'ಸಮಾಜವೆಂಬ ಮಹಾ ಜೀವದಿಂದ ವ್ಯಕ್ತಿಯು ತನ್ನ ಬುದ್ಧಿಬಲವನ್ನೂ, ವಿವೇಕವನ್ನೂ ಮತ್ತು ನಿಜತ್ವವನ್ನೂ ಪಡೆದಿದ್ದಾನೆ' ಎಂದು ಹೇಳಿದ್ದಾರೆ. ಈ ಎರಡೂ ಸೀಮಾಂತರಗಳ ನಡುವೆ ಹೊಯ್ದಾಡುವ ತಾತ್ವಿಕ ವಾದವು ನಮ್ಮನ್ನು ನಿರಂತರವೂ ಎದುರಿಸಿದೆ. ಒಂದಿಲ್ಲ ಒಂದು ದೃಷ್ಟಿಯಿಂದ ಈ ವಾದವು ಬಹು ಜನರ ಶೈಕ್ಷಣಿಕ ದೃಷ್ಟಿಕೋನದ ಮೇಲೆ ಪರಿಣಾಮವನ್ನುಂಟು ಮಾಡುತ್ತ ಬಂದಿದೆ. ಬಾಲಕನಿಗೆ ಅವನ ಮೇಲ್ಮೆಗಾಗಿ ಶಿಕ್ಷಣ ಕೊಡಬೇಕೆಂದು ಕೆಲವರು ಹೇಳುತ್ತಾರೆ. ಇನ್ನು ಕೆಲವರು ಬಾಲಕನಿಗೆ ತನ್ನ ರಾಜ್ಯದ ಮತ್ತು ಸಮಾಜದ ನಿಷ್ಠಾವಂತ ಸೇವಕನಾಗಲು ಶಿಕ್ಷಣ ಕೊಡಬೇಕೆಂದು ಹೇಳುತ್ತಾರೆ. ಈ ಮಹತ್ವದ ವಾದಗ್ರಸ್ತ ಸಮಸ್ಯೆಯ ಬಗ್ಗೆ ಸ್ಪಷ್ಟವಾದ ತೀರ್ಮಾನಕ್ಕೆ ಬರುವುದು ಇಲ್ಲಿ ಉಚಿತ.

### ೫. ವ್ಯಕ್ತಿಯು ಸಮಾಜದ ಮೂಲ

"ಮಾನವನು ಸಮಾಜ ಜೀವಿ. ಗುಂಪಿನಲ್ಲಿ ಜೀವಿಸುವುದು ಅವನ ಹುಟ್ಟುಗುಣ. ಈ ಹುಟ್ಟು ಗುಣವೇ ಎಲ್ಲ ನಾಗರಿಕತೆಯ ಅಡಿಗಲ್ಲು"—ಎಂದು ಹೇಳುವುದು ನಾಣ್ಣುಡಿಯಾಗಿದೆ. ಈ ವಿಶಾಲ ಸಿದ್ಧಾಂತಕ್ಕೆ ತಂದು ಮುಟ್ಟಿಸುವ ವಾದಗಳನ್ನು ವಿವರಿಸುವುದು ಸುಲಭ: ಸಾಮಾಜಿಕ ವಾತಾವರಣಕ್ಕೆ ಅನುಗುಣವಾಗಿ ಮನುಷ್ಯನು ವರ್ತಿಸುತ್ತಾನೆ. ತಂದೆ-ತಾಯಂದಿರು, ಅಣ್ಣ-ತಮ್ಮಂದಿರು, ಶಿಕ್ಷಕರು, ಸಂಗಡಿಗರು, ಗೆಳೆಯರು, ವಿರೋಧಿಗಳು, ಒಡೆಯರು, ಆಳುಗಳು-ಮೊದಲಾದವರ ಕಡೆಯಿಂದ ದೊರೆಯುವ ಮಾನಸಿಕ ಪ್ರಭಾವಗಳು ಸಾಮಾಜಿಕ ವಾತಾವರಣದಲ್ಲಿ ಅಡಕವಾಗಿರುತ್ತವೆ. ಇದಲ್ಲದೆ ಐತಿಹಾಸಿಕ ವಿಚಾರಗಳೂ, ನಡೆನುಡಿಗಳೂ, ಸಂಸ್ಥೆಗಳೂ ಮನುಷ್ಯನ ಮಾನಸಿಕ ಜೀವನದ ಮೇಲೆ ಅಮೋಘವಾದ ಪರಿಣಾಮವನ್ನುಂಟುಮಾಡುತ್ತವೆ. ಹೀಗೆ ಸಾಮಾಜಿಕ ವಾತಾವರಣ ಮತ್ತು ಸಾಮಾಜಿಕ ಪರಂಪರೆಗಳ ಪರಿಣಾಮವಾಗಿ ಮನುಷ್ಯನು ರೂಪುಗೊಳ್ಳುತ್ತಾನೆ. ಈ ವಿಧವಾದ ನಿಚ್ಚಳ ಸಂಗತಿಗಳನ್ನು ಅಲ್ಲಗಳೆಯುವುದಾಗಲಿ ಇಲ್ಲವೆ ಅವುಗಳ ಮಹತ್ವವನ್ನು ಅಲಕ್ಷಿ

ಸುವುದಾಗಲಿ ಹುಚ್ಚುತನ. ಆದರೂ ಈ ಬಗೆಯ ಸಂಗತಿಗಳನ್ನು ಒಪ್ಪಿ ಕೊಳ್ಳುವ ಮುಂಚೆ ನಾವು ಜಾಗರೂಕತೆ ವಹಿಸುವುದು ಅವಶ್ಯವಿದೆ. ಏಕೆಂದರೆ ನಾವು ಒಪ್ಪಿಕೊಂಡ ಈ ಸಂಗತಿಗಳ ಆಧಾರದ ಮೇಲೆ ಅನೇಕ ತತ್ವಜ್ಞಾನಿ ಗಳು ಸಲ್ಲದ ಸಿದ್ಧಾಂತಗಳನ್ನು ತೆಗೆದಿದ್ದಾರೆ. ಸಾಮಾಜಿಕ ವಾತಾವರಣ ಮತ್ತು ಸಾಮಾಜಿಕ ಪರಂಪರೆಗಳು ಮನುಷ್ಯನ ಮಾನಸಿಕ ಜೀವನದ ಮೇಲೆ ಅಮೋಘವಾದ ಪರಿಣಾಮವನ್ನುಂಟು ಮಾಡಬಲ್ಲವೆಂದು ಒಪ್ಪಿಕೊಂಡ ಮಾತ್ರಕ್ಕೆ, ಸಮಾಜಕ್ಕೆ "ವಿಶ್ವರೂಪಿ ಜೀವ" ವಿದೆಯೆಂದ ಹಾಗೆ ಆಗಲಿಲ್ಲ. ವ್ಯಕ್ತಿಗಳ ಹಿತಸಂಬಂಧಗಳನ್ನು ಸಂರಕ್ಷಿಸಲು ರಾಜ್ಯವು ಅವಶ್ಯವಿದೆಯೆಂದು ಒಪ್ಪಿಕೊಂಡ ಮಾತ್ರಕ್ಕೆ, ರಾಜ್ಯದ ಮೇಲ್ಮೆಗಾಗಿ ಹೆಣಗಾಡುವುದೇ ಮನುಷ್ಯ ಜೀವನದ ಘನೋದ್ದೇಶವೆಂದು ಒಪ್ಪಿಕೊಂಡ ಹಾಗೆ ಆಗಲಿಲ್ಲ. ಶಾಸ್ತ್ರಜ್ಞರು ಮತ್ತು ರಾಜಕಾರಣಿಗಳು ಈ ಬಗೆಯ ವಾದಗಳನ್ನು ಮುಂದೆ ಮಾಡುವಾಗ ಅವರು ಮಾನವನ ಬೆಲೆಗಳನ್ನು ತಿರುವು ಮುರುವು ಮಾಡುತ್ತಾರೆ. ಹೀಗೆ ಮಾಡುವುದು ಅಹಿತಕರ. ಮೂಲ ವಸ್ತುವಿಗೆ ಬೆಲೆ ಕೊಡದೆ ಅದರಿಂದ ಸಿದ್ಧ ವಾದ ಆಭರಣಕ್ಕೆ ಹೆಚ್ಚು ಬೆಲೆ ಕೊಟ್ಟ ಹಾಗೆ ಆಗುತ್ತದೆ.

## ೬. ಶಿಕ್ಷಣವು ಬಾಲಕನ ಮೇಲ್ಮೆಗಾಗಿ

ಲೋಕಸತ್ತಾತ್ಮಕ ಜೀವನದ ಹಿನ್ನೆಲೆಯಲ್ಲಿರುವ ಹುಟ್ಟುಗುಣವು ಈ ವಿಧವಾದ ತಿರುವು ಮುರುವು ವಿಚಾರವನ್ನು ವಿರೋಧಿಸುತ್ತದೆ. ಪರಂಪರಾಗತ ವಿಚಾರಗಳು ಮತ್ತು ಸಂಸ್ಥೆಗಳು ಅಬಾಧಿತವಾದವುಗಳೆಂದು ಅದು ಒಪ್ಪಿಕೊ ಳ್ಳುತ್ತದೆ. ಕೆಲವು ಸಲ ಈ ಪರಂಪರಾಗತ ವಿಚಾರಗಳು ಮತ್ತು ಸಂಸ್ಥೆಗಳು ಘನವಂತಿಕೆಯ ನಿದರ್ಶನಗಳಾಗಿರುತ್ತವೆ. ಹಲವು ಸಲ ಇವೇ ಅಸಹ್ಯವಾದವು ಗಳೂ,ಹಿಂಸಾತ್ಮಕವಾದವುಗಳೂ, ವಿಚಾರವಿಹೀನವಾದವುಗಳೂ, ಅಪರಿಪೂರ್ಣ ವಾದವುಗಳೂ ಆಗಿರುತ್ತವೆ. ಈ ಮಾತನ್ನೂ ಲೋಕಸತ್ತಾತ್ಮಕವಾದ ಹುಟ್ಟು ಗುಣವು ಗಮನಿಸುತ್ತದೆ. ಪರಂಪರಾಗತ ವಿಚಾರಗಳು ಮತ್ತು ಸಂಸ್ಥೆಗಳು ಉತ್ತಮ ವ್ಯಕ್ತಿಗಳನ್ನು ನಿರ್ಮಿಸುವ ಕಾರ್ಯದಲ್ಲಿ ಸಹಾಯಕವಾಗಬಲ್ಲವು. ಆದಕಾರಣ ಅದು ಅವಕ್ಕೆ ಮನ್ನಣೆ ಕೊಡುತ್ತದೆ. ಆದರೆ ಅವುಗಳ ವೈಭವದ ಎದುರಿಗೆ ಅದು ತನ್ನ ತನವನ್ನು ಕಳೆದುಕೊಳ್ಳಲು ಸಿದ್ಧವಿರುವುದಿಲ್ಲ. ಲೋಕ ಸತ್ತಾತ್ಮಕ ಹುಟ್ಟುಗುಣದ ಈ ಮಾರ್ಗದರ್ಶನವು ಸಾಧುವಾಗಿದೆಯೆಂದು

ನಂಬಲು ಅಡ್ಡಿಯಿಲ್ಲ. ಈ ನಂಬುಗೆಯಿಂದ ಹೊರಡುವ ಶೈಕ್ಷಣಿಕ ಯೋಜನೆಯು ಸ್ಪಷ್ಟವಾಗಿಯೇ ಇದೆ:—ಯಾವುದೇ ಒಂದು ಶೈಕ್ಷಣಿಕ ಯೋಜನೆಯ ಬೆಲೆಯನ್ನು ನಿರ್ಧರಿಸುವಾಗ, ಆ ಯೋಜನೆಯ ಕಕ್ಷದಲ್ಲಿ ಬಂದ ಬಾಲಕ ಬಾಲಕಿಯರ ವೈಯಕ್ತಿಕ ಮೇಲ್ಮೆಯು ಅತಿ ಉಚ್ಚ ಮಟ್ಟವನ್ನು ಮುಟ್ಟಿದೆಯೋ ಇಲ್ಲವೋ ಎಂಬ ಸಂಗತಿಯನ್ನು ಗಮನಿಸುವುದು ಒಳಿತು.

## ೭. ಸ್ವತಂತ್ರ ಚಟುವಟಿಕೆಯ ಶೈಕ್ಷಣಿಕ ಬೆಲೆ

ಈ ಸಿದ್ಧಾಂತವನ್ನೇ ಶೈಕ್ಷಣಿಕ ಧೋರಣೆಯ ತಳಹದಿಯನ್ನಾಗಿ ಇಟ್ಟುಕೊಳ್ಳಬಹುದು. ಈ ಮಾನವ ಪ್ರಪಂಚದಲ್ಲಿ ಯಾವುದೊಂದು ಒಳಿತುಂಟಾಗಬೇಕಾದರೆ ಅದಕ್ಕೆ ಸ್ವತಂತ್ರ ಸ್ತ್ರೀಪುರುಷರ ಸ್ವತಂತ್ರ ಚಟುವಟಿಕೆಗಳೇ ಕಾರಣ. ಆದುದರಿಂದ, ಶೈಕ್ಷಣಿಕ ಪದ್ಧತಿಯು ಈ ಸತ್ಯಕ್ಕೆ ಅನುಗುಣವಾಗಿ ರೂಪುಗೊಳ್ಳಬೇಕು.

ಮನುಷ್ಯನು ತನ್ನ ಸ್ವಭಾವಕ್ಕನುಗುಣವಾಗಿ ವೃದ್ಧಿ ಹೊಂದಬಲ್ಲನು. ಈ ಸ್ವಭಾವವು "ಸ್ವಯಂಪ್ರೀತ" ವಿರುವಷ್ಟೇ "ಸಮಾಜಶೀಲವೂ" ಆಗಿದೆ. ಈ ಮಾತು ತನ್ನ ಸಂಗಡಿಗರ ಬಗ್ಗೆ ಇರಬೇಕಾದ ಮನುಷ್ಯನ ಹೊಣೆಯನ್ನು ಎಳ್ಳಷ್ಟೂ ಕಡಿಮೆಮಾಡುವುದಿಲ್ಲ. ಈ ಮಾತು ಪರಂಪರಾಗತ ಆಚಾರ ವಿಚಾರಗಳಿಂದ ಮತ್ತು ಸಾಮಾಜಿಕ ಶಿಸ್ತಿನಿಂದ ಮನುಷ್ಯನ ಮೇಲಾಗುವ ಪರಿಣಾಮವನ್ನು ಅಲ್ಲಗಳೆಯುವುದಿಲ್ಲ. ಆದರೆ ಅದು "ಸಮಾಜವೆಂಬ ಮಹಾ ಜೀವದಿಂದ ಮನುಷ್ಯ ಜೀವವು ತನ್ನ ವಿವೇಕವನ್ನೂ, ನಿಜತ್ವವನ್ನೂ ಪಡೆದಿದೆ" ಎಂಬ ಮಾತನ್ನು ಮಾತ್ರ ಒಪ್ಪುವುದಿಲ್ಲ. ಮನುಷ್ಯ ಜೀವವು ಕ್ಷುದ್ರವಾದುದು ಎಂಬ ಹೇಳಿಕೆಯನ್ನು ಅದು ವಿರೋಧಿಸುತ್ತದೆ. ಅದು ಮನುಷ್ಯನ ವ್ಯಕ್ತಿತ್ವದ ಅಪಾರ ಬೆಲೆಯನ್ನು ಸಮರ್ಥಿಸುತ್ತದೆ. ಮನುಜನು ತನ್ನ ದೈವಕ್ಕೆ ತಾನೇ ಹೊಣೆಗಾರನು ಎಂಬ ಮಾತನ್ನೂ ಅದು ಪುನಃ ಪುನಃ ಸಮರ್ಥಿಸುತ್ತದೆ. ಈ ಸಮರ್ಥನೆಯಿಂದ ಹೊರಡಬಹುದಾದ ವ್ಯಾವಹಾರಿಕ ಉಪಸಿದ್ಧಾಂತಗಳನ್ನೆಲ್ಲಾ ಅದು ಎದುರಿಸುತ್ತದೆ.

ಇದೇ ಮಾತನ್ನು ಬೇರೊಂದು ರೀತಿಯಿಂದ ಹೇಳಬಹುದು. ಪ್ರತಿಯೊಬ್ಬನೂ ಎರಡನೆಯವರಿಂದ ದೊರಕಿದ ಸ್ಫೂರ್ತಿಯ ಪರಿಣಾಮವಾಗಿ

ತನ್ನ ಜೀವದ ಆದರ್ಶವನ್ನು ಕಂಡುಕೊಳ್ಳುವಂತೆ ಭಾಸವಾಗುತ್ತದೆ. ಆದರೂ ಪ್ರತಿಯೊಬ್ಬನಿಗೆ ತನ್ನದೇ ಆದ ಒಂದು ಆದರ್ಶವಿದೆಯೆಂದು ನಾವು ಅನ್ನಬಹುದು. ಹೀಗೆ ಅನ್ನುವಾಗ ನಾವು ಭಾಷೆಯ ಅರ್ಥವನ್ನು ಪಲ್ಲಟಗೊಳಿಸುತ್ತಿಲ್ಲ. ಪ್ರತಿಯೊಂದು ಕಲಾಕೃತಿಗೆ ತನ್ನದೇ ಆದ ಒಂದು ಆದರ್ಶವಿದೆಯೆಂದು ಹೇಳಿದಾಗ, ಆ ಮಾತನ್ನು ಎಲ್ಲರೂ ಒಪ್ಪುತ್ತಾರೆ. ಒಂದು ಕವನದ ನಿದರ್ಶನವನ್ನು ಇಲ್ಲಿ ತೆಗೆದುಕೊಳ್ಳಬಹುದು. ಕವಿಯ ನಿರ್ಮಾಪಕ ಚೇತನವು ಕುಗ್ಗಿದಾಗ ಅವನು ಎರಡನೆಯವರ ಕವನದ ಕಡೆಗೆ ಬೆರಳು ಮಾಡಿ, "ಅದೋ ನೋಡು, ನಾನು ಅಂತಹದನ್ನೇ ನಿರ್ಮಿಸಲು ಹೊರಟಿದ್ದೆ!"— ಎಂದು ಎಂದೂ ಹೇಳಲಾರ. ಅವನ ಆದರ್ಶವು ಅವನ ಕವನದಲ್ಲಿ ಒಡಮೂಡಬೇಕಲ್ಲದೆ, ಇತರರ ಕವನದಲ್ಲಿಯಲ್ಲ. ಅವನ ಆದರ್ಶವು ಅವನ ಕವನದ ಅಪರಿಪೂರ್ಣತೆಯನ್ನು ಅಳೆಯುವ ಮಾನದಂಡ. ಅದನ್ನೂ ಇತರರು ನಿರ್ಮಿಸಲಾರರು. ಹೀಗೆ ಪ್ರತಿಯೊಬ್ಬನಿಗೂ ತನ್ನದೇ ಆದ ಆದರ್ಶವಿದೆಯೆಂದಮೇಲೆ, ಒಂದೇ ಆದರ್ಶವನ್ನೊಳಗೊಂಡ ಶೈಕ್ಷಣಿಕ ಗುರಿಯು ಸರ್ವಸಮ್ಮತ ಗುರಿಯೆನಿಸಲಾರದು. ಮನುಷ್ಯನ ವ್ಯಕ್ತಿತ್ವದ ಸಂಪೂರ್ಣ ವಿಕಾಸಕ್ಕೆ ಅನುಕೂಲವಾದ ವಾತಾವರಣವನ್ನು ಕಲ್ಪಿಸುವ ಮಟ್ಟಿಗೆ ಮಾತ್ರ ಶೈಕ್ಷಣಿಕ ಪ್ರಯತ್ನಗಳು ನಡೆಯಬೇಕು. ಮಾನವ ಪ್ರಪಂಚವು ವೈವಿಧ್ಯದಿಂದ ತುಂಬಿದೆ. ಇಂತಹ ಪ್ರಪಂಚದ ಕಲ್ಯಾಣಕ್ಕಾಗಿ ತನ್ನ ನೈಜ ಸ್ವಭಾವದಿಂದ ಹೊರಬೀಳುವ ಕೃತಿರತ್ನವನ್ನು ಕೊಡಲು ಪ್ರತಿಯೊಬ್ಬ ಬಾಲಕನಿಗೂ ಶಿಕ್ಷಣವು ಅನುವು ಮಾಡಿ ಕೊಡಬೇಕು. ತನ್ನದೇ ಆದ ರೀತಿಯಲ್ಲಿ ಜನತೆಯ ಕಲ್ಯಾಣ ಮಾಡಲು ಪ್ರತಿಯೊಬ್ಬ ಬಾಲಕನಿಗೂ ಶಿಕ್ಷಣವು ಸ್ವತಂತ್ರತೆಯನ್ನು ಒದಗಿಸಬೇಕು.

ಈ ದೃಷ್ಟಿಕೋನವು ಮಾನವನ ಐತಿಹಾಸಿಕ ಪ್ರಗತಿಯ ಸಂಗತಿಗಳ ಮೇಲೆ ನಿಂತಿದೆಯೋ ಹೇಗೆ ಎಂಬುದನ್ನು ಪರಿಶೀಲಿಸಬೇಕಾಗಿದೆ. ಇದು ಮನುಷ್ಯ ಸ್ವಭಾವದ ಭದ್ರವಾದ ತಳಹದಿಯ ಮೇಲೆ ನಿಲ್ಲಬೇಕಲ್ಲದೆ, ನಮ್ಮ ಸುಂದರ ಕಲ್ಪನೆಯ ಮೇಲೆ ನಿಲ್ಲಕೂಡದು. ಆದರೆ ಆ ಪರಿಶೀಲನೆಯನ್ನು ಕೈಕೊಳ್ಳುವ ಮುನ್ನ ಈ ದೃಷ್ಟಿಕೋನಕ್ಕೆ ಕೊಡಬಹುದಾದ ಕೆಲವು ಅಪಾರ್ಥಗಳನ್ನು ಇಲ್ಲಿ ವಿವೇಚಿಸೋಣ.

## ೮. ಶಿಕ್ಷಕನ ನೈತಿಕ ಹೊಣೆಯ ಪರಿಮಿತಿ

ಮೇಲೆ ಸ್ಥೂಲವಾಗಿ ಹೇಳಿದ ತತ್ವವು ಜೀವನದ ಒಳ್ಳೆಯ ಮತ್ತು ಕೀಳ ಆದರ್ಶಗಳೆರಡನ್ನೂ ಸಮ ದೃಷ್ಟಿಯಿಂದ ನೋಡುವಂತೆ ಭಾಸವಾಗುತ್ತದೆ. ಕೆಲವು ಆದರ್ಶಗಳು ಉತ್ತೇಜನೆಗೆ ಅರ್ಹವಾದವುಗಳಿರುತ್ತವೆ; ಇನ್ನು ಕೆಲವು ಕ್ಷುಲ್ಲಕವಾದವುಗಳಿರುತ್ತವೆ. ಹಾಗಾದರೆ ಶಿಕ್ಷಕನು ಒಳ್ಳೆಯ ಮತ್ತು ಕೀಳ ಶೀಲ ಸ್ವಭಾವಗಳೆರಡನ್ನೂ ಸಮದೃಷ್ಟಿಯಿಂದ ಪ್ರೋತ್ಸಾಹಿಸುವುದು ಯೋಗ್ಯವೋ? ಆಯಾ ಶೀಲ ಸ್ವಭಾವಗಳ ನೈತಿಕ ಬೆಲೆಯನ್ನು ಲಕ್ಷ್ಯಕ್ಕೆ ತಾರದೆ ಶಿಕ್ಷಕನು ಎಲ್ಲವನ್ನೂ ಸಹಾನುಭೂತಿಯಿಂದ ಕಾಣಬೇಕೋ? ಹೀಗೆ ಮಾಡುವುದು ಸರಿಯಲ್ಲವೆಂದು ವ್ಯವಹಾರ ಜ್ಞಾನವು ಸೂಚಿಸುತ್ತದೆ. ಆದರೆ ಒಂದು ಮಾತು ಮಾತ್ರ ಸ್ಪಷ್ಟವಿದೆ: ಮಗುವು ಜನ್ಮವೆತ್ತಿದಾಗ ಅದು ತನ್ನ ಹೊಣೆಯನ್ನು ತಾನೇ ನಿರ್ವಹಿಸಲಾರದು. ದೊಡ್ಡವನಾದ ಮೇಲೆ ಅವನು ತನ್ನ ಜೀವನಕ್ಕೆ ತಾನೇ ಹೊಣೆಗಾರನೆಂದು ಎದೆ ತಟ್ಟಿ ಹೇಳಬಹುದು; ಮತ್ತು ಆಗ ಅಂತಹ ಹೊಣೆಯನ್ನು ಅವನೇ ನಿರ್ವಹಿಸಬೇಕಾಗುವುದು. ಮಗುವಿನ ಬೆಳವಣಿಗೆಗಾಗಿ ಕುಟುಂಬ ಮತ್ತು ಶಾಲೆಗಳೆರಡೂ ಸಮ ಹೊಣೆಯುಳ್ಳ ಸಂಸ್ಥೆಗಳು. ಆ ಹೊಣೆಯು ಬಾಲ್ಯದಲ್ಲಿ ಹೆಚ್ಚು ಗುರುತರವಾಗಿರುತ್ತದೆ. ಮುಂದೆ ದಿನಗಳುರುಳಿದಂತೆ, ಬಾಲಕನ ವ್ಯಕ್ತಿತ್ವವು ರೂಪುಗೊಳ್ಳುತ್ತದೆ. ಅದು ನಿಶ್ಚಿತ ರೂಪ ಧಾರಣ ಮಾಡುತ್ತ ಹೋದಂತೆ ತಂದೆ-ತಾಯಿಗಳ ಮತ್ತು ಶಿಕ್ಷಕರ ಹೊಣೆಯು ಕ್ರಮೇಣ ಕಡಿಮೆಯಾಗುತ್ತ ಹೋಗುತ್ತದೆ. ಬಾಲಕನು ಬೆಳೆದು ದೊಡ್ಡವನಾಗುವ ಸಣ್ಣ ಪ್ರಪಂಚದಲ್ಲಿ ಉತ್ತಮ ವ್ಯಕ್ತಿತ್ವದ ಪೋಷಣೆಗೆ ಯೋಗ್ಯವಾದ ವಸ್ತುಗಳು ಅಡಕವಾಗಿರುವಂತೆ ವಾತಾವರಣವನ್ನು ಕಲ್ಪಿಸುವುದು ತಂದೆ ತಾಯಿಗಳ ಮತ್ತು ಶಿಕ್ಷಕರ ಆದ್ಯ ಕರ್ತವ್ಯವಾಗಿರುತ್ತದೆ. ಅವರು ಆ ಪುಟ್ಟ ಪ್ರಪಂಚದಿಂದ ಕ್ಷುಲ್ಲಕ ಸಂಗತಿಗಳನ್ನು ದೂರವಾಗಿರಿಸಬೇಕು. ಇಲ್ಲಿ ನಾವು ಬಾಲಕನ ಸ್ವತಹದ ಇಚ್ಛೆಗೆ ಬದಲಾಗಿ ಇತರರ ಇಚ್ಛೆಗೆ ಎಡೆಗೊಡುತ್ತಿದ್ದೇವೆ. ಬಾಲಕನಿಗೆ ಒಳ್ಳೆಯದು ಯಾವುದು ಕೆಡಕು ಯಾವುದು ಎಂಬುದನ್ನು ಇಲ್ಲಿ ತಂದೆ ತಾಯಿಗಳು ಮತ್ತು ಶಿಕ್ಷಕರು ನಿರ್ಣಯಿಸಬೇಕಾಗುತ್ತದೆ. ಅವರ ನಿರ್ಣಯವು ಹಲವು ಬಾರಿ ತಪ್ಪಾದದ್ದೂ, ಬಾಲಕನ ವ್ಯಕ್ತಿತ್ವದ ಬೆಳವಣಿಗೆಗೆ ಬಾಧಕ

ವಾದವಷ್ಟೂ ಆಗಿರಬಹುದು. ಬಾಲಕನು ಬೆಳೆದು ದೊಡ್ಡವನಾಗುವ ಪ್ರಪಂಚದ ನಿರ್ಮಾಣದಲ್ಲಿ ಅವನ ಅಂಗವಿರುವುದಿಲ್ಲ. ಅಂದಮೇಲೆ, ಇಲ್ಲಿ ನಾವು ಬಾಲಕನ ಸ್ವಯಂ ನಿರ್ಮಾಪಕ ಬೆಳವಣಿಗೆಯ ಸ್ವಾತಂತ್ರ್ಯಕ್ಕೆ ಇತಿ ಮಿತಿಯನ್ನುಂಟು ಮಾಡುತ್ತಿದ್ದೇವೆ. ಆದರೆ ಇಂತಹ ಇತಿಮಿತಿಗಳು ಜೀವನದ ಅಪರಿಹಾರ್ಯ ಸಂಗತಿಗಳು. ಶಿಲ್ಪಿಯು ಮೂರ್ತಿಯನ್ನು ನಿರ್ಮಿಸುವಾಗ ತನಗೆ ದೊರೆತಂತಹ ಸಾಮಗ್ರಿಗಳನ್ನೇ ಉಪಯೋಗಿಸಿಕೊಳ್ಳಲೇಬೇಕು. ಆದರೆ ಆ ಸಾಮಗ್ರಿಗಳನ್ನು ಹೇಗೆ ಉಪಯೋಗಿಸಿಕೊಳ್ಳಬೇಕೆಂಬ ವಿಷಯದಲ್ಲಿ ಮಾತ್ರ ಅವನು ಸ್ವತಂತ್ರನು. ಇದೇ ಪ್ರಕಾರ ಶಾಲೆಯ ಅಭ್ಯಾಸಪತ್ರಿಕೆ ಮತ್ತು ಶಿಸ್ತುಗಳು ಬಾಲಕನ ಬೆಳವಣಿಗೆಗಾಗಿ ದೊರಕುವ ಸಾಮಗ್ರಿಗಳು. ಆಧಿಪತ್ಯವು ಉತ್ತಮಪ್ರದವೆಂದು ನಿರ್ಣಯಿಸಿದ ಪುರಾತನ ಸಾಂಸ್ಕೃತಿಕ ಮತ್ತು ನೈತಿಕ ವಿಚಾರಗಳನ್ನು ಅವು ಪ್ರತಿನಿಧಿಸುತ್ತವೆ. ಇದು ಅನಿವಾರ್ಯ. ಆದರೂ ಅವುಗಳನ್ನು ತನ್ನ ಬೆಳವಣಿಗೆಗಾಗಿ ಉಪಯೋಗಿಸಿಕೊಳ್ಳಲು ಬಾಲಕನು ಸ್ವತಂತ್ರನು. ಎಲ್ಲ ಬಗೆಯ ವೈವಿಧ್ಯಗಳನ್ನು ಕೂಡಿಕೊಂಡು ಈ ಜಗತ್ತು ನಿರ್ಮಾಣವಾಗಿದೆ; ಆದುದರಿಂದ, ಪ್ರತಿಯೊಬ್ಬನೂ ತನ್ನ ಸಹಜ ಪ್ರವೃತ್ತಿಯಂತೆ ಬೆಳೆದುದಾದರೆ ಜಗತ್ತು ಅದರಿಂದ ಹೆಚ್ಚು ವೈಭವಶಾಲಿ ಯಾಗುವುದು. ಎಲ್ಲರೂ ಅನುಸರಿಸಲೇಬೇಕಾದಂತಹ ನೈತಿಕ ಕಟ್ಟಳೆಗಳ ಪಾಲನೆಯು ಸಹ ಅನಂತ ರೂಪಗಳನ್ನು ತಾಳಬಹುದು. ಯಾವುದೇ ಒಂದು ಕೃತಿಯ ಬೆಲೆಯನ್ನು ನಿರ್ಧರಿಸಬಲ್ಲ ತತ್ವಸರಣಿಯನ್ನು ಆ ಕೃತಿಯು ಪೂರ್ತಿಗೊಳ್ಳದ ಮುನ್ನ ಹೆಣೆಯಲು ಸಾಧ್ಯವಿಲ್ಲ.

ಜಾಣ ಶಿಕ್ಷಕನಾದವನು ಅವಶ್ಯವಿದ್ದುದಕ್ಕಿಂತಲೂ ಹೆಚ್ಚು ನಿರ್ಬಂಧನೆ ಗಳನ್ನು ಬಾಲಕರಮೇಲೆ ಹೇರಲು ಎಂದೂ ಪ್ರಯತ್ನ ಪಡುವುದಿಲ್ಲ. ಒಂದು ಹೊಸ ಬಗೆಯ ವ್ಯಕ್ತಿತ್ವದ ಆಚಾರ ವಿಚಾರ ಮತ್ತು ಶೈಲಿ ಮೊದಲಾದವು ಗಳು ಜಗತ್ತಿನ ನಿಜ ಸಂಪತ್ತಿಗೆ ಸಾಧಕವಾಗಿವೆಯೋ ಬಾಧಕವಾಗಿವೆಯೋ ಎಂಬುದನ್ನು ಮೊದಲೇ ನಿರ್ಣಯಿಸುವುದು ದುಃಸಾಧ್ಯ. ನಮ್ಮ ಪರಂಪರಾ ಗತ ಮೂಢ ತಿಳುವಳಿಕೆಗಳಿಗೆ ಒಗ್ಗದೇ ಇದ್ದುದನ್ನೆಲ್ಲಾ ಸೌಂದರ್ಯ, ಉತ್ತಮತೆ ಮತ್ತು ಸತ್ಯಗಳಿಗೆ ವಿರೋಧವಾದುದೆಂದು ಹಳಿಯುವುದು ಬಹು ಸುಲಭ. ಮಾನವನ ಜ್ಞಾನ ಭಾಂಡಾರದಲ್ಲಿಯ ಅನರ್ಘ್ಯ ರತ್ನಗಳೆಂದು

ಎಣಿಸಲ್ಪಡುವ ನಿರ್ಮಾಪಕ ಕೃತಿಗಳನ್ನು ಹತ್ತಿಕ್ಕಲು ಮಾಡಿದ ಹಿಂದಿನ ಕಾಲದ ಹಲವು ಪ್ರಯತ್ನಗಳನ್ನು ನಾವು ನೆನಪಿಗೆ ತಂದಕೊಳ್ಳಬೇಕು. ಗುರುತ್ವಾಕರ್ಷಣದ ಗತಿಯನ್ನು ಪ್ರಯೋಗದಿಂದ ಸಿದ್ಧಮಾಡಿಕೊಟ್ಟ ಗ್ಯಾಲಿಲಿಯೋನನ್ನು ಮಾಟಗಾರನೆಂದು ಶೂಲಕ್ಕೇರಿಸಲು ಸಿಧ್ಧವಾಗಿದ್ದಿಲ್ಲವೆ ? ಒಂದು ಪ್ರಬಂಧವನ್ನು ಬರೆದ ಷೆಲ್ಲಿ ಮಹಾಕವಿಯನ್ನು ವಿದ್ಯಾಪೀಠದಿಂದ ಹೊರಗೆ ತಳ್ಳಲಾಯಿತಲ್ಲವೆ ? ಇಂತಹ ಹತ್ತಿಕ್ಕುವ ಪ್ರಯತ್ನಗಳು ಪುನಃ ಪುನಃ ನಡೆಯುತ್ತಿವೆಯೆಂಬುದನ್ನು ಉಳಿದ ಜನರಿಗಿಂತಲೂ ಹೆಚ್ಚಾಗಿ ಶಿಕ್ಷಕರು ನೆನಪಿನಲ್ಲಿಡಬೇಕು. ನಿಸರ್ಗ ದೇವತೆಯ ವಿರುದ್ಧ ಹೋರಾಡುವ ಪ್ರಸಂಗವನ್ನು ಎಂದೂ ತಂದುಕೊಳ್ಳದಂತೆ ಶಿಕ್ಷಕನು ಸದಾ ಜಾಗ್ರತನಾಗಿರಬೇಕು. ಸಾಮಾಜಿಕ ನಡೆನುಡಿಗಳನ್ನು ಬಾಲಕರಿಗೆ ಕಲಿಸುವಾಗಂತೂ ಶಿಕ್ಷಕನು ಕೇವಲ ಗತಕಾಲದ ಗ್ರಂಥದೊಳಗಿನ ಮಾತುಗಳನ್ನಷ್ಟೇ ಕಲಿಸಕೂಡದು. ಸಮಾಜದ ನಿಯಮಗಳನ್ನು ಅನೇಕ ರೀತಿಯಿಂದ ಪಾಲಿಸಬಹುದು. ಮಾನವನ ನಿರ್ಮಾಪಕ ಶಕ್ತಿಯು ಎಂತಹ ಕೃತಿಯ ರೂಪದಿಂದ ಹೊರಬೀಳುವುದೆಂಬುದನ್ನು ಯಾರೂ ಹೇಳಲಾರರು. ಗಾಂಧೀಜಿಯವರಂತೆ ಬಲವಂತನೂ ಧೀರೋದಾತ್ತನೂ ಆದವನೊಬ್ಬನು ಮೊದಮೊದಲು ಸಮಾಜ ವಿರೋಧಿಯೆಂದು ಭಾಸವಾಗಬಹುದು. ಆದರೆ ಅವನೇ ಮುಂದೆ ತನ್ನ ವ್ಯಕ್ತಿತ್ವದ ಪ್ರಭಾವದಿಂದ ಇಡೀ ಶಮಾಜದ ನೈತಿಕ ಮಟ್ಟವನ್ನು ಎತ್ತರಿಸಬಹುದು. ಅಷ್ಟು ಧೀರನಲ್ಲದವನೂ ಸಹ ತನ್ನ ನೈಜ ಪ್ರವೃತ್ತಿಯನ್ನು ಬೆಳೆಸಿಕೊಂಡರೆ ಮಾತ್ರ ಸಮಾಜಹಿತ ಸಾಧಿಸಬಲ್ಲನು. ಸ್ವಲ್ಪದರಲ್ಲಿ ಹೇಳಬೇಕಾದರೆ, ಪ್ರತಿಯೊಬ್ಬನೂ ತನ್ನ ತನವನ್ನು ಕಳೆದುಕೊಂಡು ಇತರರಂತೆ ತಾನಾಗದೆ, ತನ್ನ ಪ್ರವೃತ್ತಿ ಮತ್ತು ವಾತಾವರಣಗಳನ್ನು ತನ್ನ ವ್ಯಕ್ತಿತ್ವದ ಮೇಲ್ಮೆಗಾಗಿ ಬಳಸಿಕೊಂಡು ಪರಿಪೂರ್ಣತೆಯನ್ನು ಹೊಂದಬೇಕು. ಅಂದರೆ ಮಾತ್ರ ನಿಜವಾದ ಸಮಾಜಹಿತ ಸಾಧಿಸಬಲ್ಲದು.

### ೯. ವ್ಯಕ್ತಿತ್ವ ಮತ್ತು ರಾಜ್ಯದ ಗಂಡಾಂತರ

ರಾಜ್ಯದ ಅಸ್ತಿತ್ವಕ್ಕೆ ಧಕ್ಕೆ ಬಂದಾಗ ವೈಯಕ್ತಿಕ ಬೆಳವಣಿಗೆಯನ್ನು ತಡೆಯುವಂತಹ ಇಲ್ಲವೆ ವ್ಯಕ್ತಿತ್ವವನ್ನೇ ಬಲಿಕೊಡುವಂತಹ ಸೇವೆಗಾಗಿ ಅದು ತನ್ನ ನಾಗರಿಕರನ್ನು ಒತ್ತಾಯಪಡಿಸಬಹುದಲ್ಲವೆ ? ಗಂಡಾಂತರ

ಪ್ರಸಂಗದಲ್ಲಿ ರಾಜ್ಯವು ತನ್ನ ಸೇವೆಗಾಗಿ ನಾಗರಿಕರನ್ನು ಒತ್ತಾಯಪಡಿಸ ಬಹುದೆಂದು ಒಪ್ಪಿಕೊಂಡರೆ, ನಮ್ಮ ಸಿದ್ಧಾಂತದ ತಾರ್ಕಿಕ ತಳಹದಿಯು ಕುಸಿದು ಬೀಳಲಿಕ್ಕಿಲ್ಲವೆ ? ಕಳೆದ ಎರಡು ಮಹಾ ಯುದ್ಧಗಳಲ್ಲಿ ಅಸಂಖ್ಯ ತರುಣರು ತಮ್ಮ ಜೀವದ ಬಲಿದಾನ ಕೊಟ್ಟು ತಮ್ಮ ವ್ಯಕ್ತಿತ್ವದ ಸಾರ್ಥ ಕತೆಯನ್ನು ಪಡೆದರೆಂದು ಈ ಪ್ರಶ್ನೆಗೆ ಉತ್ತರಿಸಬಹುದು. ಇದು ಸಮರ್ಪಕ ವಿದ್ದರೂ ಪೂರ್ಣ ಉತ್ತರವೆನಿಸಲಾರದು. ಮಾನವ ಪ್ರಪಂಚವು ಇಂದಿನ ದುರ್ದೆಸೆಯನ್ನು ಕೊನೆಯವರೆಗೂ ಅನುಭವಿಸಲೇಬೇಕೆಂಬ ವಿಧಿಲಿಖಿತವಿಲ್ಲ. ಈ ದುರ್ದೆಸೆಯಿಂದ ಮುಕ್ತರಾಗಬಲ್ಲೆವೆಂಬ ಆತ್ಮವಿಶ್ವಾಸವಿದ್ದರೆ ಇಂದಿಲ್ಲ ನಾಳೆ ಈ ಲೋಕದ ಮಹಾತ್ಮರು ನಿಶ್ಚಯವಾಗಿ ಒಳ್ಳೆಯ ಮಾರ್ಗವನ್ನು ಕಂಡು ಹಿಡಿಯಬಲ್ಲರು. ಬಹು ಜನರ ಕಲ್ಯಾಣ ಮತ್ತು ಪ್ರತಿಯೊಬ್ಬ ವ್ಯಕ್ತಿಯ ಕಲ್ಯಾಣ--ಇವೆರಡೂ ಸಮನ್ವಯವಾಗಿರುವಂಥಹ ಜಗದ ಕನಸನ್ನು ಕಾಣು ವುದು ತಪ್ಪೇನೂ ಅಲ್ಲವೆಂದು ಬಗೆದರೆ, ಅಂತಹ ಕನಸನ್ನು ನನಸನ್ನಾಗಿ ಮಾಡಲು ಸಹಾಯಕವಾಗುವಂತಹ ಎಲ್ಲ ಪ್ರಯತ್ನಗಳನ್ನೂ ಮಾಡುವುದು ವಿಹಿತವೇ ಸರಿ. ಮನುಷ್ಯನ ವ್ಯಕ್ತಿತ್ವದ ಮಹತ್ವವನ್ನು ಪ್ರಚುರಪಡಿಸುವುದು ಇಂತಹ ಪ್ರಯತ್ನಗಳಲ್ಲಿ ಅತ್ಯುತ್ತಮವಾದುದು. ಜನರಲ್ಲಿ ತಮ್ಮ ವ್ಯಕ್ತಿ ತ್ವದ ಬೆಲೆಯ ವಿಚಾರವನ್ನು ಪ್ರಬಲಗೊಳಿಸುವುದಕ್ಕಿಂತಲೂ ಹೆಚ್ಚಿನ ಪವಿತ್ರ ಕಾರ್ಯವು ಶಿಕ್ಷಣಕ್ಕೆ ಇನ್ನೊಂದಿಲ್ಲ. ವೈಯಕ್ತಿಕ ಜೀವವು ಕೇವಲ ತಮ್ಮ ಹಿತಕ್ಕಾಗಿ ಮಾತ್ರವಿರದೆ, ಅದು ಜಗತ್ತಿನಲ್ಲಿ ನಿಜವಾದ ಬೆಲೆಯನ್ನು ನಿರ್ಮಿಸ ಬಲ್ಲ ಒಂದೇ ಒಂದು ಶಕ್ತಿಯಾಗಿರುತ್ತದೆ. ಈ ಮಾತನ್ನೇ ಶಿಕ್ಷಣವು ಜನರಿಗೆ ಮನಗಾಣಿಸಿಕೊಡಬೇಕು. ಸ್ವಾತಂತ್ರ್ಯದ ಭದ್ರವಾದ ತಳಹದಿಯೇ ಇದರ ಲ್ಲಿದೆ. ಹಿಂಸಾತ್ಮಕ ದಬ್ಬಾಳಿಕೆಯನ್ನು ವಿರೋಧಿಸಬಲ್ಲ ಸ್ಥಿರವಾದ ಆಶ್ವಾಸ ನವೂ ಇದರಲ್ಲಿದೆ.

## ೧೦. ವ್ಯಕ್ತಿತ್ವದ ಮೇಲ್ಮೆಯ ಶಿಕ್ಷಣದ ವ್ಯಾವಹಾರಿಕತೆ

ಮೇಲೆ ಹೇಳಿದ ತತ್ವದ ಉದ್ದೇಶಗಳು ಒಳ್ಳೆಯವಾಗಿವೆಯೆಂದು ಒಪ್ಪಿ ಕೊಳ್ಳುವ ಕೆಲವರು ಅದರ ವ್ಯಾವಹಾರಿಕತೆಯ ಬಗ್ಗೆ ಸಂಶಯಪಡಬಹುದು. ಪ್ರತಿಯೊಬ್ಬ ವಿದ್ಯಾರ್ಥಿಗೆ ಪ್ರತ್ಯೇಕ ಶಾಲೆಯು ಬೇಕಾಗದಿದ್ದರೂ, ಪ್ರತ್ಯೇಕ ಅಭ್ಯಾಸಪತ್ರಿಕೆಯಾದರೂ ಬೇಕಾಗಲಿಕ್ಕಿಲ್ಲವೆ ?— ಎಂದು ಕೇಳಬಹುದು.

ಇಲ್ಲಿಯೂ ಸಹ ನಾವು ಮಾನವ ಜೀವನದ ಬದಲಿಸಲಶಕ್ಯವಾದ ಸ್ಥಿತಿಗತಿಗಳನ್ನು ಬದಲಿಸಲು ಪ್ರಯತ್ನಪಡುತ್ತಿಲ್ಲ; ಆದರೆ ನಾವು ಆ ಸ್ಥಿತಿಗತಿಗಳ ಸದುಪಯೋಗ ಪಡಿಸಿಕೊಳ್ಳಲು ಮಾತ್ರ ಬಯಸುತ್ತೇವೆ. ಸಮಾಜ ಜೀವನದಲ್ಲಿ ಮಾತ್ರ ವ್ಯಕ್ತಿತ್ವವು ವಿಕಾಸಹೊಂದಬಲ್ಲದು. ಅದು ಸಾಮೂಹಿಕ ಹಿತ ಸಂಬಂಧಗಳ ಮತ್ತು ಚಟುವಟಿಕೆಗಳ ಪೋಷಣೆಯಿಂದ ವೃದ್ಧಿಹೊಂದಬಲ್ಲದು. ಏಕಾಂತದಲ್ಲಿ ಯಾರೂ ತಮ್ಮ ವ್ಯಕ್ತಿತ್ವವನ್ನು ಪ್ರಕಟಪಡಿಸಲಾರರು. ಸಾಮೂಹಿಕ ಜೀವನದ ಪರಿಮಿತಿಯಲ್ಲಿ ವ್ಯಕ್ತಿತ್ವದ ಸಹಜ ವಿಕಾಸಕ್ಕೆ ಪೂರ್ಣ ಸ್ವಾತಂತ್ರ್ಯವಿರಬೇಕು; ಮತ್ತು ತನ್ನ ಸಹಜ ಒಲವಿಗೆ ವಿರೋಧವಾದ ಶಕ್ತಿಗಳಿಂದ ಅದಕ್ಕೆ ತಡೆಯುಂಟಾಗಬಾರದು. ಇಂತಹ ಸ್ಥಿತಿಗತಿಗಳನ್ನು ಉಂಟುಮಾಡಿದರೆ ಕೆಲ ಬಾಲಕ ಬಾಲಕಿಯರು ಸ್ವಭಾವತಃ ಏಕಾಂತ ಜೀವಿಗಳಾಗಬಹುದು. ಹಾಗೆ ಜೀವಿಸಲು ಅವರಿಗೆ ಪೂರ್ಣ ಅವಕಾಶ ಕೊಡುವುದು ಸಾಮಾನ್ಯ ಜನತೆಯ ಹಿತದ ದೃಷ್ಟಿಯಿಂದ ಒಳ್ಳೆಯದೇ ಸರಿ. ಸಮೂಹ ಮತ್ತು ನಾಯಕ--ಇವೆರಡರ ಪ್ರಬಲವಾದ ಆಕರ್ಷಣೆಗಳ ನಿಮಿತ್ಯ ಬಾಲಕಬಾಲಕಿಯರಲ್ಲಿ ಬಹು ಸಂಖ್ಯಾತರು ಜಗತ್ತಿನಲ್ಲಿ ರೂಢವಾಗಿರುವ ಶೀಲ ಸ್ವಭಾವಗಳನ್ನೇ ಅನುಕರಣ ಮಾಡುವರೆಂಬುವರಲ್ಲಿ ಸಂಶಯವಿಲ್ಲ. ಇಲ್ಲಿ ವ್ಯಕ್ತಿತ್ವ ಮತ್ತು ವ್ಯಂಗತನ ಒಂದೇ ಎಂದು ಅರ್ಥಮಾಡಿಕೊಳ್ಳಬಾರದು. ಶಿಕ್ಷಕರು ವ್ಯಕ್ತಿತ್ವವನ್ನು ಕೃತ್ರಿಮರೀತಿಯಿಂದ ನಿರ್ಮಿಸಬೇಕೆಂದು ಇಲ್ಲಿ ಹೇಳುತ್ತಿಲ್ಲ; ಆದರೆ ಪ್ರತಿಯೊಬ್ಬ ಬಾಲಕನ ಸಹಜ ಒಲವುಗಳೊಳಗಿಂದ ನಿರಾತಂಕವಾಗಿ ವ್ಯಕ್ತಿತ್ವವು ಬೆಳೆದು ಪರಿಪೂರ್ಣತೆಯನ್ನು ಹೊಂದಲು ಶಿಕ್ಷಕರು ಅವಕಾಶ ಕಲ್ಪಿಸಬೇಕೆಂದು ಮಾತ್ರ ಇಲ್ಲಿ ಹೇಳಿದೆ.

## ೧೧. ವ್ಯಕ್ತಿ ಸ್ವಾತಂತ್ರ್ಯವೇ ಶಿಕ್ಷಣದ ಆದರ್ಶ

ಲೋಕಸತ್ತಾತ್ಮಕ ವಾದಿಗಳು ಯಾವಾಗಲೂ ವ್ಯಕ್ತಿ ಸ್ವಾತಂತ್ರ್ಯಕ್ಕಾಗಿ ಹೋರಾಡಿದ್ದಾರೆ. ಬೇರಾವ ತೋರಿಕೆಯ ಉತ್ತಮತೆಗೆ ಬದಲಾಗಿ ಅದನ್ನು ಅವರು ಬಿಟ್ಟುಕೊಟ್ಟಿಲ್ಲ. ಜೀವನ ಸಂಗ್ರಾಮವನ್ನು ಪ್ರತಿಯೊಬ್ಬನೂ ತನ್ನದೇ ಆದ ರೀತಿಯಲ್ಲಿ ನಡೆಯಿಸಲು ಮತ್ತು ತನಗೆ ಸಾಧ್ಯವಿದ್ದಮಟ್ಟಿಗೆ ಅದರ ಸವಿಯನ್ನುಣ್ಣಲು ಅವನು ಸ್ವತಂತ್ರನಿರಬೇಕು. ಇದೇ ಅವರ ಹೋರಾಟದ ತಳಹದಿ. ಇದೇ ಮಾನವನ ಸ್ವಭಾವಕ್ಕೆ ಮತ್ತು ವಿವೇಕಕ್ಕೆ

ಒಪ್ಪುವ ಒಂದೇ ಒಂದು ಸರ್ವಸಮ್ಮತ ಆದರ್ಶ. ಉಳಿದ ಆದರ್ಶಗಳೆಲ್ಲವೂ ಈ ಪ್ರಜ್ವಲಿಪ ಆದರ್ಶದಿಂದ ಹೊರಬಿದ್ದ ಕಿಡಿಗಳು ಮಾತ್ರ. ಸ್ವಾತಂತ್ರ್ಯವೇ ಜಗತ್ತಿನ ಎಲ್ಲ ಉಚ್ಚ ಸಾಂಸ್ಕೃತಿಕ ಬೆಲೆಗಳ ಮೂಲ; ಮತ್ತು ಅವುಗಳ ಪೋಷಣೆಯ ಶಾಶ್ವತ ಸಂಗತಿ. ಸ್ವಾತಂತ್ರ್ಯವಿಲ್ಲದ ಕರ್ತವ್ಯಕ್ಕೆ ಅರ್ಥವಿಲ್ಲ; ಸ್ವಾರ್ಥತ್ಯಾಗಕ್ಕೆ ಬೆಲೆಯಿಲ್ಲ; ಆಧಿಪತ್ಯಕ್ಕೆ ನೈತಿಕ ಬೆಂಬಲವಿಲ್ಲ. ವ್ಯಕ್ತಿ ಸ್ವಾತಂತ್ರ್ಯವು ರಾಷ್ಟ್ರ ರಾಷ್ಟ್ರಗಳ ವಿಶ್ವಬಾಂಧವ್ಯದ ವ್ಯಾಪ್ತಿಗೆ ಭದ್ರವಾದ ತಳಹದಿಯನ್ನು ಒದಗಿಸುತ್ತದೆ. ಸ್ವಾತಂತ್ರ್ಯದ ತಳಹದಿಯಮೇಲೆಯೇ ವಿಶ್ವದ ಜನಾಂಗಗಳು ಪರಸ್ಪರ ಸೌಹಾರ್ದದಿಂದ ಸಹಕರಿಸಬಲ್ಲವು. ಸ್ವಾತಂತ್ರ್ಯವೇ ಈ ಲೋಕವನ್ನು ಸ್ವರ್ಗಸಮಾನವನ್ನಾಗಿ ಮಾಡಬಲ್ಲ ರಹಸ್ಯ. ಶಿಕ್ಷಣಕ್ಕೆ ಸ್ಫೂರ್ತಿಯನ್ನು ದಯಪಾಲಿಸಲಿಕ್ಕೂ, ಮಾರ್ಗದರ್ಶನ ಮಾಡಲಿಕ್ಕೂ, ಇದಕ್ಕಿಂತಲೂ ಕಡಿಮೆ ತರಗತಿಯ ಆದರ್ಶವನ್ನಿಟ್ಟುಕೊಳ್ಳಬಹುದೆ? ಇಲ್ಲವೆ ಇದಕ್ಕಿಂತಲೂ ಹೆಚ್ಚಿನ ತರಗತಿಯ ಆದರ್ಶವು ದೊರೆಯಬಲ್ಲದೆ?

# ೨. ವ್ಯಕ್ತಿತ್ವದ ಗುಣಧರ್ಮಗಳು

"ವ್ಯಕ್ತಿತ್ವವೇ ಜೀವದ ಆದರ್ಶ" ವೆಂದು ಒಂದೇ ಮಾತಿನಲ್ಲಿ ಹಿಂದಿನ ಪ್ರಕರಣದ ಕೇಂದ್ರವಿಚಾರವನ್ನು ಒಂದುಗೂಡಿಸಬಹುದು. ಆದರ್ಶವೆಂದರೆ ಪ್ರಯತ್ನದ ಗುರಿ, ಪ್ರಯತ್ನದ ಜಯಾಪಜಯಗಳನ್ನು ಅಳೆಯುವ ಅಳತೆ ಗೋಲು. ವ್ಯಕ್ತಿತ್ವವು ಇಂತಹದೇ ಒಂದು ಜೀವದ ಆದರ್ಶ. ಆದರೆ ಇದರ ನಿಶ್ಚಿತ ಗುಣಧರ್ಮಗಳಾವವು ?

ಇಲ್ಲಿ ಮನುಷ್ಯ ಜೀವ ಮತ್ತು ಒಂದು ಕಲಾಕೃತಿಯ ನಡುವೆ ಇರುವ ಹೋಲಿಕೆಯ ವಿವರಣೆ ಮಾಡುವುದು ಸಹಾಯಕಾರಿಯಾಗಿರುತ್ತದೆ. ಪ್ರತಿಯೊಂದು ಕವನದ, ಚಿತ್ರದ ಇಲ್ಲವೆ ಶಿಲ್ಪದ ಸೌಂದರ್ಯವು ಕಲಾವಿದನ ವ್ಯಕ್ತಿತ್ವದ ತೆರೆಮರೆಯಾದ ಪ್ರದರ್ಶನವೆಂದು ಹೇಳಬಹುದು. ಯಾಕಂದರೆ ಕಲಾಕೃತಿಯು ಒಂದು ಸುಂದರ ಶೈಲಿಯಲ್ಲಿ ಕಲಾವಿದನ ವಿವಿಧ ಗುಣಧರ್ಮಗಳನ್ನು ವ್ಯಕ್ತಪಡಿಸುತ್ತದೆ. ಕಲಾವಿದನ ಜೀವದ ವಿವಿಧ ಗುಣಧರ್ಮಗಳು ಅವನ ಕಲಾಕೃತಿಯಲ್ಲಿ ಕೇಂದ್ರೀಕೃತವಾಗಿ ಚೇತನಾತ್ಮಕ ಸ್ವರೂಪವನ್ನು ತಾಳುತ್ತವೆ. ಜೀವದ ಈ ಮುಖ್ಯ ಗುಣಧರ್ಮಗಳನ್ನು ಸುಲಭವಾಗಿ ಗುರುತಿಸಬಹುದು.

## ೧. ವೈವಿಧ್ಯದಲ್ಲಿ ಏಕರೂಪತೆ.

ಮೊದಲನೆಯದಾಗಿ, ಕಲಾವಿದನು ತನಗೆ ದೊರೆತ ವಿವಿಧ ಸಾಮಗ್ರಿಗಳ ಮುಖಾಂತರ ಒಂದೇ ಒಂದು ಯೋಜನೆಯನ್ನು ಪ್ರಕಟಪಡಿಸುತ್ತಾನೆ. ಅವನ ವಿವಿಧ ಸಾಮಗ್ರಿಗಳು ಅವನ ಯೋಜನೆಯಲ್ಲಿ ಆಕಸ್ಮಿಕವಾಗಿ ಇಲ್ಲವೆ ಅಸಂಬದ್ಧವಾಗಿ ಬರುವುದಿಲ್ಲ. ಅವು ಅಲ್ಲಿ ಉಚಿತವಾದ ಮತ್ತು ಅರ್ಥಗರ್ಭಿತವಾದ ಸ್ಥಾನವನ್ನು ಪಡೆಯುತ್ತವೆ. ಹೀಗೆ ಕಲಾವಿದನು ವೈವಿಧ್ಯದಲ್ಲಿ ಏಕರೂಪತೆಯನ್ನು ತನ್ನ ಸಾಮಗ್ರಿಗಳ ಮೇಲೆ ಬೀರುತ್ತಾನೆ. ಈ ಏಕರೂಪತೆಯು ಎಷ್ಟು ಉತ್ತಮವಾಗಿರುತ್ತದೆಯೋ ಅಷ್ಟೇ ಸುಂದರವಾದ ಕಲಾಕೃತಿಯು ನಿರ್ಮಾಣವಾಗುತ್ತದೆ.

## ೨. ಸ್ವಯಂಪ್ರೇರಣೆ

ಎರಡನೆಯದಾಗಿ, ಸುಂದರವಾದ ಕಲಾನಿರ್ಮಾಣವು ಸ್ವಯಂಪ್ರೇರಣಾತ್ಮಕವಾದುದು. ಕಲಾವಿದನು ತನಗೆ ದೊರೆತ ಸಾಮಗ್ರಿಗಳನ್ನು ಬೇಕಾದ ಹಾಗೆ ಉಪಯೋಗಿಸಿಕೊಳ್ಳಬಲ್ಲನು. ಹೀಗೆ ಮಾಡುವಾಗ ಕವಿಯಾದವನು ಛಂದಸ್ಸಿನ ನಿಯಮಗಳನ್ನು ಬಿಟ್ಟುಕೊಡಬಲ್ಲನೆಂದು ಅಲ್ಲ; ಸಂಗೀತಗಾರನು ಸ್ವರಭೇದಗಳನ್ನಾಗಲಿ ಇಲ್ಲವೆ ತಾಳಮೇಳಗಳನ್ನಾಗಲಿ ತಿರಸ್ಕರಿಸಬಲ್ಲನೆಂದು ಅಲ್ಲ; ಚಿತ್ರಗಾರನು ತನ್ನ ಎದುರಿಗಿರುವ ಆಕೃತಿಯ ಮೈಕಟ್ಟು ಮತ್ತು ಭಂಗಿಗಳನ್ನು ಅಲಕ್ಷಿಸಬಲ್ಲನೆಂದು ಅಲ್ಲ. ಆದರೆ ಕಲಾವಿದನು ತನಗೆ ದೊರೆತ ಸಾಮಗ್ರಿಗಳನ್ನು ಹೀಗೆಯೇ ಉಪಯೋಗಿಸಬೇಕೆಂದು ಒತ್ತಾಯಪಡಿಸಬಲ್ಲ ಬಾಹ್ಯನಿಯಮವಾವುದೂ ಇಲ್ಲ. ರಾಘವಾಂಕನ ಹರಿಶ್ಚಂದ್ರ ಕಾವ್ಯವನ್ನು "ಭವಿಯ ಬಣ್ಣಿಪ ಕಾವ್ಯ"ವೆಂದು ಹರಿಹರನು ತೆಗಳಿದನು. ಆದರೆ ಇಂದಿನ ಬುದ್ಧಿವಂತ ಜನಾಂಗವು ಆ ಮಹಾಕಾವ್ಯಕ್ಕೆ ತನ್ನದೇ ಆದ ಒಂದು ಸೌಂದರ್ಯವಿದೆಯೆಂದು ಗುರುತಿಸಿದೆ. ಕಾವ್ಯವು ಜನರ ಹೃದಯಾಂತಃಕರಣಗಳ ಮೇಲೆ ಉಂಟುಮಾಡುವ ಪರಿಣಾಮದ ಮೇಲಿಂದ ಅದರ ಬೆಲೆಯ ನಿರ್ಣಯ ಮಾಡಬೇಕೇ ಹೊರತು, ಒಂದು ಬಾಹ್ಯ ನಿಯಮದಿಂದಲ್ಲ. ಅದೇ ರೀತಿ, ಒಬ್ಬ ಸಂಶೋಧಕನು ತನ್ನ ಎದುರಿಗಿರುವ ಸಾಮಗ್ರಿಗಳ ಗುಣಧರ್ಮಗಳನ್ನು ಮತ್ತು ಭೌತಿಕ ನಿಯಮಗಳನ್ನು ಗಮನಿಸಲೇಬೇಕು. ಆದರೆ ತನ್ನ ಸಾಮಗ್ರಿಗಳನ್ನು ಹೇಗೆ ಉಪಯೋಗಿಸಕೊಳ್ಳಬೇಕು ಎಂಬ ಮಾತಿನಲ್ಲಿ ಅವನನ್ನು ಯಾರೂ ಒತ್ತಾಯಪಡಿಸಲಾರರು. ಹಾಗೆ ಮಾಡುವುದೆಂದರೆ, ಯಂತ್ರವನ್ನು ಮಾಡುವ ಮಾರ್ಗವನ್ನು ಗೊತ್ತುಹಚ್ಚುವ ಮೊದಲು ಯಂತ್ರವನ್ನು ಶೋಧಿಸಿದಂತೆಯೇ ಸರಿ.

ವೈವಿಧ್ಯದಲ್ಲಿ ಏಕರೂಪತೆ ಮತ್ತು ಸ್ವಯಂಪ್ರೇರಣಾತ್ಮಕ ಪ್ರವೃತ್ತಿಗಳೆರಡೂ ಜೀವದ ಮೂಲ ಗುಣಧರ್ಮಗಳು ಇವೇ ವ್ಯಕ್ತಿತ್ವದ ಗುರುತುಗಳು.

ಸ್ವಯಂ ಪ್ರೇರಣಾತ್ಮಕ ಪ್ರವೃತ್ತಿಯು ಮಾನವನ ಸ್ವಾತಂತ್ರ್ಯದ ತಿರುಳು. ಮಾನವನ ಇಚ್ಛಾಶಕ್ತಿಯು ಸ್ವತಂತ್ರವಾಗಿದೆಯೆಂದು ಹೇಳಿದ ಮಾತ್ರಕ್ಕೆ ಮನುಷ್ಯನು ತನ್ನ ಗುಣಧರ್ಮಗಳಿಂದ ಸ್ವತಂತ್ರನು ಎಂದು

ತಿಳಿಯುವುದು ನಗೆಗೇಡಾದ ಮಾತು. ಆದರೆ ಯಂತ್ರವನ್ನು ಮಾಡುವ ಮಾರ್ಗವನ್ನು ಗೊತ್ತುಹಚ್ಚುವ ಮುಂಚೆ ಯಂತ್ರವನ್ನು ಶೋಧಿಸುವುದು ಅಶಕ್ಯ, ಕವನವನ್ನು ರಚಿಸುವ ಮುಂಚೆ ಕವನದ ತಿರುಳನ್ನು ಕಂಡುಹಿಡಿಯುವುದು ಅಶಕ್ಯ,— ಎಂಬ ಮಾತುಗಳಲ್ಲಿ ಹುದುಗಿದ ನಿಚ್ಚಳವಾದ ಸತ್ಯವೇ ಮಾನವನ ಇಚ್ಛಾಶಕ್ತಿಯ ಸ್ವಾತಂತ್ರ್ಯದ ಲಕ್ಷಣವೆಂದು ತಿಳಿಯುವುದು ಜಾಣತನದ ಮಾತು.

ವೈವಿಧ್ಯದಲ್ಲಿ ಏಕರೂಪತೆಯನ್ನು ಮಾನವನ ಉದ್ದೇಶಪೂರಿತ ಎಲ್ಲ ಕೃತಿಗಳಲ್ಲಿಯೂ ಕಾಣಬಹುದು ಒಂದು ತುತ್ತು ಅನ್ನವನ್ನು ಬಾಯಿಯೊಳಗೆ ಹಾಕಿಕೊಳ್ಳುವ ಚಟುವಟಿಕೆಯಿಂದ ಹಿಡಿದು ಒಬ್ಬ ಸಾಮ್ರಾಟನ ವಿಶ್ವವ್ಯಾಪ್ತಿಯಾದ ಚಟುವಟಿಕೆಗಳ ವರೆಗೆ ಎಲ್ಲ ಕೃತಿಗಳೂ ಇದೇ ಮಾತನ್ನು ಸ್ಪಷ್ಟಪಡಿಸುತ್ತವೆ. ಮಾನವನ ಜ್ಞಾನಭಾಂಡಾರದಲ್ಲಿಯೂ ಸಹ ವೈವಿಧ್ಯದಲ್ಲಿ ಏಕರೂಪತೆಯನ್ನು ಕಾಣಬಹುದು. ಮನೆ ಮಠಗಳು, ವಾಹನಗಳ ಚಲನೆವಲನೆಗಳು, ಜನರ ಮುಖಕಮಲಗಳು— ಮೊದಲಾದವುಗಳನ್ನು ಗುರುತಿಸುವ ಜ್ಞಾನದಿಂದ ಹಿಡಿದು ಗ್ರಹಗತಿಗಳನ್ನೂ, ಸಂಸ್ಕೃತಿಯ ಮಹತ್ತರ ಬೆಲೆಗಳನ್ನೂ ಕಂಡುಹಿಡಿಯುವ ಜ್ಞಾನದ ವರೆಗೆ ಎಲ್ಲವೂ ಇದೇ ಮಾತನ್ನು ಸ್ಪಷ್ಟಪಡಿಸುತ್ತವೆ. ಹೀಗೆ ಕೃತಿ ಮತ್ತು ಗ್ರಹಿಕೆಗಳೆರಡರಲ್ಲಿಯೂ ಕಂಡುಬರುವ ಈ ಏಕರೂಪತೆಯು ವ್ಯಕ್ತಿಯ ಏಕರೂಪತೆಯ ಪ್ರದರ್ಶನವಾಗಿರುತ್ತದೆ. ಈ ಏಕರೂಪತೆಯೇ ಜೀವದ ತಿರುಳು. ಅದು ವ್ಯಕ್ತಿಯ ಜೀವನಾಳದಲ್ಲಿ ಸದಾ ಚಲಿಸುತ್ತಿರುತ್ತದೆ. ಅದು ಇಡೀ ಜೀವಮಾನಕ್ಕೆ ಸ್ಥೂಲವಾಗಿ ಹರಡಿದೆ. ಅಂತೆಯೇ ಒಂದು ಉತ್ತಮ ಜೀವನ ಚರಿತ್ರೆಯನ್ನು ಓದುವಾಗ ನಮಗೆ ಹರ್ಷವೆನಿಸುತ್ತದೆ. ಇದಕ್ಕೆ ಅದರಲ್ಲಿ ತೋರ್ಪಡುವ ಜೀವದ ಏಕರೂಪತೆಯ ಆಕರ್ಷಣವೇ ಕಾರಣ.

## ೩. ದೇಹದ ಬೆಳವಣಿಗೆಯಲ್ಲಿ ಕಂಡುಬರುವ ಏಕರೂಪತೆ ಮತ್ತು ಸ್ವಯಂಪ್ರೇರಣೆ

ವ್ಯಕ್ತಿತ್ವದ ಬಗ್ಗೆ ಹೇಳುವಾಗ ಇದುವರೆಗೆ ಕೇವಲ ಮಾನವನ ಜಾಗೃತಾವಸ್ಥೆಯ ಮಾನಸಿಕ ಸಂಗತಿಗಳ ನಿದರ್ಶನಗಳನ್ನಷ್ಟೇ ತೆಗೆದು

ಕೊಂಡಿದ್ದೇವೆ. ವಿಚಾರವಮಾಡಿ ನೋಡಿದರೆ, ಮನುಷ್ಯನ ದೈಹಿಕ ಜೀವನ ಮತ್ತು ಪ್ರಾಣಿ ಜೀವನಗಳಲ್ಲಿಯೂ ಸಹ ಅಷ್ಟೇ ಸ್ಪಷ್ಟವಾದ ವ್ಯಕ್ತಿತ್ವದ ಗುರುತುಗಳನ್ನು ಕಾಣಬಹುದು. ಮನುಷ್ಯನ ದೇಹವು ಒಂದು ಜೀವಾಣು ವಿನಿಂದ ಪ್ರಾರಂಭವಾಗುತ್ತದೆ. ಜೀವಾಣುವಿನಲ್ಲಿ ಸ್ವಯಂಪ್ರೇರಣಾತ್ಮಕ ಪ್ರವೃತ್ತಿಯು ಇರುವುದರಿಂದಲೇ ಅದು ಬೆಳೆಯತೊಡಗುತ್ತದೆ. ಅದು ಬೆಳೆದು ದೊಡ್ಡದಾಗುವಾಗ ಅನೇಕ ಅವಯವಗಳು ಕ್ರಮೇಣ ಕಾಣಿಸಿ ಕೊಳ್ಳುತ್ತವೆ. ಈ ಅವಯವಗಳು ಪರಸ್ಪರ ತಿಳುವಳಿಕೆಯಿಂದ ಒಂದೇ ಉದ್ದೇಶಸಾಧನೆಗಾಗಿ ಹೆಣಗುವಂತೆ ಭಾಸವಾಗುತ್ತವೆ. ಅವುಗಳ ಉದ್ದೇಶವು ದೇಹಕ್ಕೆ ಒಂದು ನಿಶ್ಚಿತ ರೂಪವನ್ನು ಕೊಡುತ್ತದೆ. ಹೀಗೆ ಶಾರೀರಿಕ ಬೆಳವಣಿಗೆಯು ಎಲ್ಲೆಡೆಯಲ್ಲಿಯೂ ಏಕರೂಪತೆಯ ಯೋಜನೆಯನ್ನು ಪ್ರಕಟಪಡಿಸುತ್ತದೆ. ಅನಂತ ವಾದ್ಯಗಳ ಸಮ್ಮಿಲನದಿಂದ ಒಂದೇ ಒಂದು ಸಂಗೀತವು ಹೊರಬೀಳುವಂತೆ ದೇಹದ ಏಕರೂಪತೆಯು ಪ್ರಫುಲ್ಲಿತವಾಗುತ್ತಿರುತ್ತದೆ. ಹೀಗೆ ಜೀವದ ವಿಶಾಲ ಸಂಗತಿಗಳು ಮೂಲತಃ ದೇಹ ಮತ್ತು ಚಿತ್ತಗಳೆರಡಕ್ಕೂ ಅನ್ವಯಿಸುತ್ತವೆ.

## ೪. ಜೀವವು ಒಂದು ಯಂತ್ರವೋ?

ಹಾಗಾದರೆ ಜೀವದ ಗುಟ್ಟನ್ನು ಭೌತಿಕ ನಿಯಮಗಳ ಸಹಾಯದಿಂದ ವಿವರಿಸಬಹುದೋ? ಈ ಪ್ರಶ್ನೆಗೆ ಅನೇಕ ವಿಜ್ಞಾನಿಗಳು ಸಮರ್ಪಕವಾದ ಉತ್ತರ ಕೊಡಲು ಪ್ರಯತ್ನ ಮಾಡಿದ್ದಾರೆ. ನಮ್ಮ ಶರೀರವು ಜಡವಸ್ತುಗಳಿಂದ ರಚಿಸಲ್ಪಟ್ಟಿದೆ. ಶರೀರದ ಅಂತಿಮ ದ್ರವ್ಯಗಳು ಪರಿಚಿತವಿರುವ ರಸಾಯನ ದ್ರವ್ಯಗಳಾಗಿವೆ. ಶರೀರದೊಳಗಿನ ನೀರು ಮತ್ತು ವಾಯುಗಳು ಹೊರಗೆ ಕಾಣುವ ನೀರು ಮತ್ತು ವಾಯುಗಳಂತೆಯೇ ಇವೆ. ನಾವು ಉಸಿರಾಡಿಸುವ ಪ್ರಾಣವಾಯು ನಮ್ಮ ದೇಹದಲ್ಲಿಯ ಮಿಶ್ರಣ-ದ್ರವ್ಯಗಳನ್ನು ಒಡೆದು ಉಷ್ಣತೆಯನ್ನು ಉಂಟುಮಾಡುತ್ತದೆ. ಹೊರ ಜಗತ್ತಿನಲ್ಲಿ ಸಹ ಅದು ಇಂತಹ ಕಾರ್ಯವನ್ನೇ ಮಾಡುತ್ತಿರುತ್ತದೆ. ನಾವು ಸೇವಿಸುವ ಅನ್ನದಿಂದ ಹೊರಡುವ ನಿಶ್ಚಿತ ಉಷ್ಣತೆಯು ನಮ್ಮ ಶರೀರದ ಯಾಂತ್ರಿಕ ಕ್ರಿಯೆಗಳಿಂದ ವ್ಯಯವಾಗುವ ಉಷ್ಣತೆಯಷ್ಟೇ ಇರುತ್ತದೆ. ಇಂತಹ ಶೋಧಗಳು ದಿನೇ ದಿನೇ ಹೆಚ್ಚುತ್ತಿರುತ್ತವೆ. ಈ ಬಗೆಯ ಮಹಾ ಶೋಧಗಳಲ್ಲಿ ತಲ್ಲೀನ

ರಾಗಿರುವ ವಿಜ್ಞಾತಿಗಳು "ಜೀವವು ಸಹ ಒಂದು ಸೂಕ್ಷ್ಮ ಯಂತ್ರ" ವೆಂದು ಹೇಳಿದಲ್ಲಿ ಅಚ್ಚರಿಯೇನು ? ಜಾಕ್ ಲೋಎಬ್ ಎಂಬವರು ಈ ಅಭಿಪ್ರಾಯದ ಶ್ರೇಷ್ಠ ಪುರಸ್ಕರ್ತರು. ಅವರು ಕೃತ್ರಿಮ ಜೀವಾಣುಗಳನ್ನು ನಿರ್ಮಾಣ ಮಾಡಲು ಪ್ರಯೋಗ ನಡೆಸಿದರು. ಪ್ರಾಣಿಗಳ ಕೃತ್ರಿಮ ಬೆಳವಣಿಗೆಯನ್ನು ಅವರು ಅಭ್ಯಸಿಸಿದರು. ದೀಪದ ಹುಳದ ಮೇಲೆ ಬೆಳಕಿನಿಂದಾಗುವ ಕ್ರಿಯೆಯ ಬಗ್ಗೆ ಅವರು ಶೋಧ ನಡೆಸಿದರು. ಈ ಎಲ್ಲ ಅಚ್ಚರಿಗೊಳಿಸುವಂತಹ ಶೋಧಗಳು ಅವರ ನಂಬುಗೆಯನ್ನು ಬಲಪಡಿಸಿದವು. ಇಚ್ಛೆ, ಉತ್ಸಾಹ, ನಿರುತ್ಸಾಹ, ಅಂತಃಕರುಣ, ಕ್ರೂರತನ— ಮೊದಲಾದ ಮಾನಸಿಕ ಕ್ರಿಯೆಗಳನ್ನು ಸಹಿತ ಭೌತಿಕ-ರಸಾಯನಿಕ ನಿಯಮಗಳಿಂದ ಸ್ಪಷ್ಟಪಡಿಸಬಹುದೆಂದು ಅವರು ಆತ್ಮವಿಶ್ವಾಸವನ್ನು ವ್ಯಕ್ತಪಡಿಸಿದ್ದಾರೆ. ಆದರೂ ಇನ್ನೂ ಹೆಚ್ಚಿನ ಆಧಾರಗಳು ದೊರೆಯುವವರೆಗೆ ಈ ಸಿದ್ಧಾಂತವನ್ನು ಒಪ್ಪುವ ಕಾರಣವಿಲ್ಲ.

### ೫. ಕ್ಷುದ್ರ ಜೀವಿಯ ಸ್ವಯಂಪ್ರೇರಣಾತ್ಮಕತೆ

ಈಚೆಗೆ ಎಚ್. ಎಸ್. ಜೆನಿಂಗ್ಸ್ ಎಂಬವರು ನಡೆಯಿಸಿದ ಶೋಧಗಳ ಪರಿಣಾಮವಾಗಿ ದೇಹ ಮತ್ತು ಮನಸ್ಸುಗಳ ನಡುವಿನ ದ್ವೈತವದ ಮೇಲಾಟವು ಕೊನೆಗೊಳ್ಳುವಂತಿದೆ. ಅವರು ಕ್ಷುದ್ರ ಜೀವಿಗಳ ನಡತೆಗಳನ್ನು ಅಭ್ಯಸಿಸಿದರು. ಅವುಗಳ ಪೂರ್ಣ ಪರಿಚಯ ಮಾಡಿಕೊಂಡರು. ಕ್ಷುದ್ರಜೀವಿಯ ಸರಳ ಸ್ವಭಾವವನ್ನು ಸಹಿತ ಭೌತಿಕ-ರಸಾಯನಿಕ ನಿಯಮಗಳಿಂದ ವಿವರಿಸಲು ಬರುವುದಿಲ್ಲೆಂದು ಅವರು ಕೊನೆಯ ನಿರ್ಣಯಕ್ಕೆ ಬಂದರು. ಪ್ರಾಣಿಯ ಶರೀರದಲ್ಲಿ ಭೌತಿಕ-ರಸಾಯನಿಕ ದ್ರವ್ಯಗಳ ಸಾಮರಸ್ಯವಿದ್ದೇ ಇರುತ್ತದೆ. ಅದರಂತೆ ಕವನದಲ್ಲಿಯೂ ಸಹ ವ್ಯಾಕರಣದ ನಿಯಮಗಳಿಗನುಸಾರವಾದ ಪದಗಳಿರುತ್ತವೆ. ಆದರೆ ಕವನವು ಕೇವಲ ವ್ಯಾಕರಣ ಪದಗಳ ಸಮೀಕರಣ ಮಾತ್ರವಲ್ಲ. ಹಾಗೆಯೇ ಕ್ಷುದ್ರಜೀವಿಯು ಸಹ ಕೇವಲ ಭೌತಿಕ-ರಸಾಯನಿಕ ದ್ರವ್ಯಗಳ ಸಮೀಕರಣ ಮಾತ್ರವಲ್ಲ. ಅತ್ಯಂತ ಕ್ಷುದ್ರ ಜೀವಿಯೂ ಸಹ ಸ್ವಯಂಪ್ರೇರಣಾತ್ಮಕವಾಗಿದೆ.

ಇಲ್ಲಿ ಸ್ಟೆಂಟೋರ ಎಂಬ ಜೀವಾಣುವಿನ ನಡತೆಯ ನಿದರ್ಶನವನ್ನು ತೆಗೆದುಕೊಳ್ಳಬಹುದು. ಅದು ಕೊಳಚೆ ನೀರಿನಲ್ಲಿ ಬೆಳೆಯುವ ವನಸ್ಪತಿಗೆ

ಅಂಟಿಕೊಂಡು ಜೀವಿಸುತ್ತದೆ. ಅದರ ಆಕಾರ ತುತೂರಿಯ ಹಾಗೆ. ಒಂದೇ ಜೀವಾಣುವಿನಿಂದ ಕೂಡಿದ ಕ್ಷುದ್ರ ಜೀವಿ ಅದು. ಅದರ ಶರೀರದ ಕೆಳ ಬದಿಗೆ ಒಂದು ನಳಿಕೆಯಿರುತ್ತದೆ. ತನಗೆ ಬೇಕಾದಾಗ ಆ ನಳಿಕೆಯೊಳಗೆ ಅದು ಹುದುಗಿಕೊಳ್ಳಬಲ್ಲದು. ಶರೀರದ ಮೇಲ್ಭಾಗದಲ್ಲಿಯ ವರ್ತುಲಾಕಾರದ ಛಿದ್ರದ ಮುಖಾಂತರ ಅದು ತನ್ನ ಆಹಾರವನ್ನು ತೆಗೆದುಕೊಳ್ಳುತ್ತದೆ. ನೀರಿನಲ್ಲಿ ವಿಷವನ್ನು ಕೂಡಿಸಿದೆವೆಂದರೆ ಆ ವಿಷದ ಅಣುಗಳು ನೀರಿನ ಅಲೆಗಳ ಸಂಗಡ ಜೀವಾಣುವಿನ ಛಿದ್ರದ ಸಮೀಪಕ್ಕೆ ಬರುತ್ತವೆ. ಮೊದಮೊದಲು ಅದು ಆ ಅಣುಗಳನ್ನು ಶರೀರದೊಳಗೆ ತೆಗೆದುಕೊಳ್ಳುತ್ತದೆ. ಆದರೆ ಸ್ವಲ್ಪ ಸಮಯದಲ್ಲಿಯೇ ಅದು ತನ್ನ ತುತೂರಿಯ ಆಕಾರದ ಶರೀರವನ್ನು ಎದುರು ಬರುವ ವಿಷದ ನೀರಿನ ಅಲೆಗಳಿಗೆ ಓರೆಯಾಗುವಂತೆ ಹೊರಳಿಸುತ್ತದೆ. ಇದರಿಂದಲೂ ವಿಷದ ಅಲೆಗಳಿಂದ ಮುಕ್ತವಾಗದಿದ್ದರೆ ಕೊನೆಗೆ ಅದು ತನ್ನ ಛಿದ್ರವನ್ನು ಅಲೆಗಳು ಜಾರಿ ಹೋಗುವಂತೆ ಒಮ್ಮಿಂದೊಮ್ಮೆ ತಿರುಗಿಸುತ್ತದೆ. ಈ ವಿಧಾನವೂ ಯಶಸ್ವಿಯಾಗದಿದ್ದರೆ ಅದು ತನ್ನ ನಳಿಕೆಯೊಳಗೆ ಹುದುಗಿ ಕೊಳ್ಳುತ್ತದೆ. ಅಲ್ಲಿ ಅದು ಒಂದು ಅರೆನಿಮಿಷ ಹುದುಗಿಕೊಂಡಿರುತ್ತದೆ. ಪುನಃ ಅದು ಹೊರಗೆ ಬರುತ್ತದೆ. ತನ್ನ ಛಿದ್ರವನ್ನು ತೆರೆಯುತ್ತದೆ. ಮೊದಲಿನಂತೆ ಅದು ತನ್ನ ಶರೀರವನ್ನು ಹೊಯ್ದಾಡಿಸಹತ್ತುತ್ತದೆ. ಇಲ್ಲಿ ಒಂದು ಅತ್ಯಂತ ಮಹತ್ವದ ಪ್ರಶ್ನೆಯು ಉದ್ಭವಿಸುತ್ತದೆ. ಈ ಮೊದಲಿನಂತೆ ವಿಷದ ಅಣುಗಳನ್ನು ನೀರಿನಲ್ಲಿ ಬೆರೆಸಿದರೆ ಸ್ಟೆಂಟೋರವು ತನ್ನ ಮೊದಲಿನ ಪ್ರತಿಕ್ರಿಯೆಗಳ ಅನುಕ್ರಮವನ್ನು ಪುನಃ ಅನುಸರಿಸುತ್ತದೆಯೋ ? ಎಂದಿಗೂ ಇಲ್ಲ. ವಿಷದ ನೀರಿನ ಅಲೆಯು ಪುನಃ ಅದರ ಸಮೀಪಕ್ಕೆ ಬರುತ್ತಲೇ ಅದು ಒಮ್ಮೆಲೆ ತನ್ನ ನಳಿಕೆಯೊಳಗೆ ಹುದುಗಿಕೊಳ್ಳುತ್ತದೆ. ಅಲ್ಲಿ ಕೆಲಹೊತ್ತು ಇದ್ದು ಅದು ಪುನಃ ಹೊರಗೆ ಬರುತ್ತದೆ. ವಿಷದ ಅಲೆಗಳು ಹಾಗೆಯೇ ಬರುತ್ತಲೇ ಇದ್ದರೆ ಬರಬರುತ್ತ ಅದು ಹುದುಗಿಕೊಂಡು ಕುಳಿತುಕೊಳ್ಳುವ ಕಾಲವು ಹೆಚ್ಚುತ್ತ ಹೋಗುತ್ತದೆ. ಕೊನೆಗೆ ಹೀಗೆ ಕುಳಿತುಕೊಂಡಿರು ವುದು ಸಹಿಸಲು ಅಸಾಧ್ಯವಾದರೆ, ಅದು ತಾನು ಅಂಟಿಕೊಂಡಿದ್ದ ಸ್ಥಾನ ದಿಂದ ಬಹು ಪ್ರಯಾಸದಿಂದ ಬಿಡಿಸಿಕೊಳ್ಳುತ್ತದೆ. ಆಮೇಲೆ ಅದು ಬೇರೆ ಕಡೆಗೆ ಈಸಿ ಹೋಗಿ ಅಲ್ಲಿ ಪುನಃ ತನ್ನ ಜೀವನ ಕ್ರಮವನ್ನು ಸಾಗಿಸಹತ್ತುತ್ತದೆ.

## ೬. ಮನುಷ್ಯ ಮತ್ತು ಕ್ಷುದ್ರ ಜೀವಿಯ ನಡುವೆ ಇರುವ ಸಾಮ್ಯ

ಇಲ್ಲಿ ಕ್ಷುದ್ರ ಜೀವಿಯ ಪ್ರತಿಕ್ರಿಯೆಗಳನ್ನು ಬಣ್ಣಿಸುವಾಗ ಮೇಲ್ಸ್ತರ ಗತಿಯ ಪ್ರಾಣಿ ಜೀವನದ ನಡತೆಗಳನ್ನು ಬಣ್ಣಿಸಲು ಉಪಯೋಗಿಸುವ ಶಬ್ದಗಳನ್ನೇ ಬಳಸಿದೆ. ಇದು ಉಚಿತವಲ್ಲದಿದ್ದರೂ ಅನಿವಾರ್ಯ. ಸ್ಟೆಂಟೋರವು ತನಗೆ ಸಾಧ್ಯವಿದ್ದ ಎಲ್ಲ ಸಣ್ಣಪುಟ್ಟ ಪ್ರಯತ್ನಗಳನ್ನು ಮಾಡುತ್ತದೆ. ಆದರೂ ವಿಷದ ಅಲೆಗಳಿಂದ ಪಾರಾಗುವುದು ಅಶಕ್ಯವಾದರೆ ಅದು ಕೊನೆಗೆ ನಿರುಪಾಯವಾಗಿ ಜೀವವನ್ನುಳಿಸಿಕೊಳ್ಳಲು ಬೇರೆಡೆಗೆ ಓಡಿ ಹೋಗುತ್ತದೆ. ಅದರ ನಡತೆಯನ್ನು ಈ ರೀತಿ ಬಣ್ಣಿಸದೆ ಗತ್ಯಂತರವಿಲ್ಲ. ನಿಜವಾಗಿ ನೋಡಿದರೆ ಈ ಕ್ಷುದ್ರ ಜೀವಿಯ ನಡತೆ ಮತ್ತು ಮನುಷ್ಯನ ನಡತೆಗಳ ನಡುವೆ ಸೂಕ್ಷ್ಮ ಅಂಶಗಳಲ್ಲಿ ಭಿನ್ನತೆಯಿದ್ದರೂ ಮುಖ್ಯ ಸ್ವಭಾವದಲ್ಲಿ ಸಾಮ್ಯವಿದೆ. ಅವಯವಗಳಾಗಲಿ ಇಲ್ಲವೆ ಆಕಾರವಾಗಲಿ ಇಲ್ಲದ ಜೀವಾಣುಗಳು ಮನುಷ್ಯರ ಕಣ್ಣಿಗೆ ಗೋಚರವಾಗುತ್ತಿದ್ದರೆ, ಅವುಗಳ ನಡತೆಗಳನ್ನು ಜನರು ಕಾಡು ಪ್ರಾಣಿಗಳ ನಡತೆಗಳನ್ನು ಬಣ್ಣಿಸುವಂತೆಯೇ ಬಣ್ಣಿಸಬಹುದಾಗಿದ್ದಿತು. ಒಂದು ಜೀವಜಂತುವಿನ ನಡತೆಯ ತಿಳುವಳಿಕೆಯನ್ನುಂಟು ಮಾಡಿಕೊಳ್ಳುವುದು ಸಹ ಮನುಷ್ಯನ ಶೀಲ ಸ್ವಭಾವಗಳನ್ನು ತಿಳಿದುಕೊಳ್ಳುವಷ್ಟೇ ಪ್ರಯಾಸದಾಯಕವಾಗಿದೆ.

ಸೃಷ್ಟಿಯಲ್ಲಿ ಜೀವನೋದಯದ ಕಾಲದಿಂದ ಎಲ್ಲ ಜೀವ ಜಂತುಗಳಲ್ಲಿ ಕಂಡುಬರುವ ನೈಸರ್ಗಿಕ ಏಕತ್ರತೆಯ ಸಜೀವ ಕಲ್ಪನೆಯು ಈ ಬಗೆಯ ಜೀವನ ಶಾಸ್ತ್ರದ ಅಭ್ಯಾಸದಿಂದ ಪ್ರತಿಯೊಬ್ಬನಿಗೆ ಉಂಟಾಗುತ್ತದೆ. ಜೀವಾಣುವಿನಿಂದ ಮೊದಲುಗೊಂಡು ಮನುಷ್ಯನ ವರೆಗಿನ ಎಲ್ಲ ಜೀವಿಗಳೂ ಚೈತನ್ಯದ ಕೇಂದ್ರಗಳಾಗಿರುತ್ತವೆ. ಅವು ಬಾಹ್ಯ ಜಗತ್ತಿನ ಸಂಗಡ ಚೇತನಾತ್ಮಕ ಸಂಬಂಧವನ್ನು ಇಟ್ಟುಕೊಂಡಿರುತ್ತವೆ. ಅವು ತಮ್ಮ ಸ್ವಭಾವಸಿದ್ಧ ಸ್ವತಂತ್ರ ಪ್ರವೃತ್ತಿಯಿಂದ ಜಗತ್ತನ್ನು ಎದುರಿಸುತ್ತವೆ. ಕಾಲಮಾನ ಪರಿಸ್ಥಿತಿಗಳಿಗೆ ತಕ್ಕಂತೆ ತಮ್ಮದೇ ಆದ ರೀತಿಯಲ್ಲಿ ಅವು ಜಗತ್ತಿನ ಸಂಗಡ ವ್ಯವಹರಿಸುತ್ತವೆ. ಈ ವ್ಯವಹಾರದ ಅನುಭವದಿಂದ ತಮ್ಮ ನಿಸರ್ಗದತ್ತ ಗುಣ ಮತ್ತು ಶಕ್ತಿಗಳಿಗನುಸಾರವಾಗಿ ಬೆಳೆದು ಅವು ತಮ್ಮ ವ್ಯಕ್ತಿತ್ವಗಳನ್ನು

ಪಡೆಯುತ್ತವೆ. ಇಂತಹ ವ್ಯಕ್ತಿತ್ವಗಳನ್ನು ಅರ್ಥಮಾಡಿಕೊಳ್ಳಲು ಅವುಗಳ ಪೂರ್ಣ ಪರಿಚಯ ಅವಶ್ಯವಿರುತ್ತದೆ. ಅಂದಮೇಲೆ, ಒಂದು ಕ್ಷುದ್ರ ಜೀವಾಣು ಮತ್ತು ಮನುಷ್ಯ ಜೀವಿಗಳೆರಡರ ಇರುವಿಕೆಯ ಮುಖ್ಯ ಅಂಶಗಳಲ್ಲಿ ಒಳ್ಳೆಯ ಹೋಲಿಕೆಯಿದೆ. ಜೀವದ ಒಂದೇ ಒಂದು ಯೋಜನೆಯ ಕಟ್ಟು ವಿವಿಧ ರೂಪಗಳಲ್ಲಿ ಹೆಣೆಯಲ್ಪಟ್ಟಿದೆ.

## ೭. ಮನುಷ್ಯ ಮತ್ತು ಕ್ಷುದ್ರ ಜೀವಿಯ ಇರುವ ಅಂತರ

ಪ್ರಾಣಿ ಜೀವದ ಏಕತ್ರತೆಯ ಮಹತ್ವವನ್ನು ನಾವು ಗಮನಿಸಿದಾಗ್ಯೂ ಸಹ ಆಯಾ ಜೀವಿಗಳ ಪರಿಪೂರ್ಣತೆಯ ಮಟ್ಟಗಳಲ್ಲಿರುವ ಅಂತರಗಳನ್ನು ಅಲಕ್ಷಿಸಬಾರದು. ಒಂದು ಕ್ಷುದ್ರ ಜೀವಾಣು ಮತ್ತು ಮನುಷ್ಯ ಜೀವಿಗಳೆರ ಡರ ವಿವರಗಳಲ್ಲಿರುವ ಪರಿಪೂರ್ಣತೆ, ವೈವಿಧ್ಯ ಮತ್ತು ಸೂಕ್ಷ್ಮತೆಗಳಲ್ಲಿ ಮಹದಂತರವಿದೆ.

ಕ್ಷುದ್ರ ಜೀವಿಗಳು ಬಾಹ್ಯ ಜಗತ್ತಿನ ಸಂಗಡ ವ್ಯವಹರಿಸುವ ಕ್ಷೇತ್ರವು ಬಹಳ ಸಣ್ಣದಾಗಿರುತ್ತದೆ. ಸಮುದ್ರದಲ್ಲಿ ಜೀವಿಸುವ ಆ್ಯನಿಮೋನ ಎಂಬ ಕ್ರಿಮಿಯ ಶರೀರದಲ್ಲಿ ನಿರ್ದಿಷ್ಟ ಅನುಭವವನ್ನುಂಟುಮಾಡುವ ಕೆಲ ಜೀವಾಂಡ ಗಳಿರುತ್ತವೆ. ಅದು ಬಾಹ್ಯ ಜಗತ್ತಿನ ಸಂಗಡ ನೇರವಾದ ಸ್ಪರ್ಶಮಾತ್ರ ದಿಂದ ವ್ಯವಹರಿಸಬಲ್ಲದು; ಇದಕ್ಕೂ ಹೆಚ್ಚಿನ ತರಗತಿಯ ಜೀವಿಗಳಿಗೆ ದೂರಿ ರುವ ಬೆಳಕು ಮತ್ತು ಧ್ವನಿಗಳನ್ನು ಅನುಭವ ಪಡೆದುಕೊಳ್ಳುವ ಇಂದ್ರಿಯ ಗಳಿರುತ್ತವೆ. ಇದರಿಂದ ಜಗತ್ತಿನ ಸಂಗಡ ವ್ಯವಹರಿಸುವ ರೀತಿಯಲ್ಲಿ ಹೆಚ್ಚಿನ ವೈವಿಧ್ಯವೂ ತೀಕ್ಷ್ಣತೆಯೂ ಉಂಟಾಗುತ್ತದೆ. ಹೀಗೆ ಹೆಚ್ಚು ಉತ್ತಮ ಇಂದ್ರಿಯಗಳಿದ್ದ ಜೀವಿಗಳಿಗೆ ಹೆಚ್ಚಿನ ತರಗತಿಯ ವ್ಯಕ್ತಿತ್ವವು ಪ್ರಾಪ್ತವಾಗುತ್ತದೆ. ಮಾನವನು ಎಲ್ಲ ಜೀವಿಗಳಲ್ಲಿಯೂ ಶ್ರೇಷ್ಠ ಜೀವಿ; ದೇವತೆಗಳಿಗೆ ಸಮಾನನೆಂದು ಗಣಿಸಲ್ಪಡುತ್ತಾನೆ. ಅವನು ತನ್ನ ಅಮೋಘ ವಾದ ಮತ್ತು ಅಗೋಚರವಾದ ಬುದ್ಧಿಬಲದಿಂದ ಈ ಜಗದ ವ್ಯವಹಾರ ಸಾಗಿಸಬಲ್ಲನು; ಹಿಂದು ಮುಂದಿನ ಆಗು ಹೋಗುಗಳನ್ನು ತಿಳಿದುಕೊಳ್ಳ ಬಲ್ಲನು; ಭೌತಿಕ ಮತ್ತು ಸಾಂಸ್ಕೃತಿಕ ವಿಚಾರಗಳಿಂದ ತನ್ನ ಜೀವನವನ್ನು

ಸಾರ್ಥಕಪಡಿಸಿಕೊಳ್ಳಬಲ್ಲನು. ಮನುಷ್ಯನ ಅಗಾಧವಾದ ಜ್ಞಾನೇಂದ್ರಿಯ ಗಳಿಗೂ, ಸ್ಪರ್ಶಮಾತ್ರದಿಂದ ಅನುಭವ ಪಡೆಯಬಲ್ಲ ಆ್ಯಮಿಬೋಸದ ಜೀವಾಂಡಗಳಿಗೂ ನಡುವೆ ಇರುವ ಅಂತರದ ಆಳವನ್ನು ನಿರ್ಧರಿಸಲು ಶಕ್ಯ ವಿಲ್ಲ. ಮನುಷ್ಯನ ಒಳಭಾಗದ ಮಾನಸಿಕ ಪದರುಗಳು ಮೂಢಾವಸ್ಥೆಯ ಲ್ಲಿವೆಯೆಂದು ನಮಗೆ ಅನಿಸುತ್ತದೆ. ನಮ್ಮ ಈ ಜ್ಞಾನದ ಆಧಾರದ ಮೇಲೆ ಹೇಳುವುದಾದರೆ, ಕ್ಷುದ್ರ ಜೀವಿಗಳ ಪ್ರತಿಕ್ರಿಯೆಗಳು ಅತ್ಯಂತ ಮೂಢಾವಸ್ಥೆ ಯಿಂದ ಉಂಟಾಗುತ್ತವೆಂದು ಹೇಳಬಹುದು. ಜೀವಿಗಳ ಪ್ರಗತಿಯ ಇತಿ ಹಾಸದ ಒಂದಾನೊಂದು ಕಾಲದಲ್ಲಿ ಅವುಗಳ ಇಂಧ್ರಿಯಗಳಲ್ಲಿ ಜ್ಞಾನೋದಯ ವಾಗಿರಬೇಕು. ಈ ಜ್ಞಾನವು ಉತ್ತರೋತ್ತರವಾಗಿ ವೃದ್ಧಿಗೊಂಡು ಕೊನೆಗೆ ಮಾನವನಲ್ಲಿಯ ಜಾಗ್ರತಾವಸ್ಥೆಯಲ್ಲಿ ಪರಿಪೂರ್ಣತೆಯನ್ನು ಹೊಂದಿದೆ. ಈ ಜಾಗ್ರತಾವಸ್ಥೆಯ ಮಾನಸಿಕ ಬಲದಿಂದ ಮನುಷ್ಯನು ನಿಯಮಬದ್ಧವಾದ ಜಗತ್ತಿನ ಸ್ಪಷ್ಟವಾದ ತಿಳುವಳಿಕೆಯನ್ನು ಮಾಡಿಕೊಳ್ಳಬಲ್ಲನು. ಮನುಷ್ಯನ ಈ ಜಾಗ್ರುತಾವಸ್ಥೆಯು ಆಕಸ್ಮಿಕವಾಗಿ ಉಂಟಾಗಿಲ್ಲ ಇಲ್ಲವೆ ನಿಷ್ಕಾರಣವಾಗಿ ತಲೆದೋರಿಲ್ಲ. ಅನಂತಕಾಲದಿಂದ ನಡೆದುಬಂದ ಜೀವನ ಪ್ರಗತಿಯ ಫಲ ವಾಗಿ ಅದು ಉಂಟಾಗಿದೆಯೆಂದು ನಂಬಬಹುದು. ಈ ಜಾಗ್ರುತಾವಸ್ಥೆಯ ಬಲದಿಂದ ಮನುಷ್ಯನ ಸಜೀವ ಕ್ರಿಯೆಗಳ ಪರಿಮಿತಿಯು ವಿಶಾಲಗೊಂಡು ಅವನ ವ್ಯಕ್ತಿತ್ವ ವಿಕಾಸಕ್ಕೆ ಅಗಾಧವಾದ ಪ್ರೇರಣೆಯು ದೊರೆಯುತ್ತದೆ.

## ೮. ಜೀವವು ಒಂದು ಚಿತ್ತವೆತ್ತ ಶರೀರ

ಡೆಕಾರ್ಟಿಸ ಎಂಬ ತತ್ವಜ್ಞಾನಿಯು ಹೇಳುವಹಾಗೆ ಮನುಷ್ಯನು ಆತ್ಮ ದಿಂದ ಬೆರೆತ ಒಂದು ಯಂತ್ರವಲ್ಲ; ಇಲ್ಲವೆ ಭೂತ ಸಂಚರಿಪ ಒಂದು ಪ್ರೇತ ವಲ್ಲ. ಮನಸ್ಸು ಮತ್ತು ಶರೀರಗಳೆರಡೂ ಬೇರೆ ಬೇರೆಯಾಗಿಲ್ಲ. ಜೀವವು ಒಂದು ಚಿತ್ತವೆತ್ತ ಶರೀರ. ಈಚೆಗೆ ಈ ಕಲ್ಪನೆಯೇ ಹೆಚ್ಚು ಬಳಕೆಯಲ್ಲಿ ಬರಹತ್ತಿದೆ.

ಇನ್ನು ಈ ಪರಿಶೀಲನೆಯ ಮುಖ್ಯಾಂಶಗಳನ್ನು ಒಂದುಗೂಡಿಸಬಹುದು; ಒಂದು ಕ್ಷುದ್ರ ಜೀವಿಯ ಗುಣಧರ್ಮಗಳನ್ನು ಸಹ ಭೌತಿಕ–ರಸಾಯನಿಕ ನಿಯಮಗಳ ಪ್ರಕಾರ ವಿವರಿಸಲು ಸಾಧ್ಯವಿಲ್ಲ. ಇಡೀ ಪ್ರಾಣಿ ಜೀವನದ

ಹೋರಾಟವು ವ್ಯಕ್ತಿತ್ವದ ಬೆಳವಣಿಗೆಯ ಒಂದು ಇತಿಹಾಸವಾಗಿದೆ. ಮಾನಸಿಕ ಜಾಗ್ರುತಾವಸ್ಥೆಯ ಬಲದಿಂದ ಮನುಷ್ಯನ ವ್ಯಕ್ತಿತ್ವವು ವೈಭವದ ಶಿಖರವನ್ನು ಮುಟ್ಟಿದೆ. ಸ್ವಯಂಪ್ರೇರಣೆ ಮತ್ತು ವೈವಿಧ್ಯದಲ್ಲಿ ಏಕರೂಪತೆ— ಇವುಗಳೇ ವ್ಯಕ್ತಿತ್ವದ ಹೆಗ್ಗುರುತುಗಳು. ಇವೇ ಜೀವದ ಮೂಲ ವಸ್ತುಗಳು.

ಜೀವದ ಈ ಸಿದ್ಧಾಂತದಿಂದ ಎರಡು ಉಪ ಸಿದ್ಧಾಂತಗಳು ಹೊರಬೀಳುತ್ತವೆ. ಮೊದಲನೆಯದು, ಒಂದನೆಯ ಪ್ರಕರಣದಲ್ಲಿ ಇಟ್ಟುಕೊಂಡ ಶಿಕ್ಷಣದ ಗುರಿಗೆ ಜೀವನ ಶಾಸ್ತ್ರದ ಸಂಗತಿಗಳಿಂದ ಬೆಂಬಲ ದೊರೆಯುತ್ತದೆ. ವ್ಯಕ್ತಿತ್ವದ ಪೋಷಣೆಯ ಗುರಿಯನ್ನಿಟ್ಟುಕೊಂಡ ಶಿಕ್ಷಣವು ಮಾತ್ರ ನೈಸರ್ಗಿಕ ಶಿಕ್ಷಣವೆನಿಸಬಲ್ಲದು. ಎರಡನೆಯದು, ವ್ಯಕ್ತಿತ್ವದ ವಿಚಾರವನ್ನು ಕೇವಲ ಮಾನಸಿಕ ಸಂಗತಿಗಳಿಗಷ್ಟೇ ಅನ್ವಯಿಸಿದರೆ ಅದರ ಪರಿಮಿತಿಯನ್ನು ಕಿರಿದು ಮಾಡಿದಹಾಗೆ ಆಗುತ್ತದೆ. ವ್ಯಕ್ತಿತ್ವವು ಇಡೀ ಚಿತ್ತವೆತ್ತ ಶರೀರಕ್ಕೆ ಅನ್ವಯಿಸುತ್ತದೆ. ಬಾಲಕನ ಜೀವದಲ್ಲಿ ಮೂಡುವ ವ್ಯಕ್ತಿತ್ವದ ರೂಪವು ಅವನ ಇಡೀ ಜೀವನದ ಇರುವಿಕೆಯ ಬಗೆಯನ್ನೇ ಅವಲಂಬಿಸಿರುತ್ತದೆ; ಇಷ್ಟೇ ಏಕೆ, ಆ ರೂಪವು ಜೀವನೋದಯದ ಎಣಿಸಲಾಗದ ದಿನಗಳಿಂದ ಆಗಿ ಹೋಗುತ್ತಿರುವ ಘಟನೆಗಳ ಅವಶೇಷಗಳಿಂದ ನಿರ್ಧರಿಸಲ್ಪಡುತ್ತಿದೆಯೆಂದರೆ ಅತಿಶಯೋಕ್ತಿಯೆನಿಸದು.

# ೩. ಹುಟ್ಟುಗುಣ ಮತ್ತು ಪೋಷಣೆ

ಶಿಕ್ಷಣರಂಗದಲ್ಲಿ ನಿಸರ್ಗದತ್ತ ಗುಣವು ಹೆಚ್ಚು ಮಹತ್ವದ ಪಾತ್ರ ವಹಿಸಿದೆಯೋ ಅಥವಾ ವಾತಾವರಣದಿಂದ ಒದಗುವ ಪೋಷಣೆಯು ಹೆಚ್ಚು ಮಹತ್ವದ ಪಾತ್ರವಹಿಸಿದೆಯೋ? ಶಿಕ್ಷಣದಲ್ಲಿ ಬಾಲಕನ ಹುಟ್ಟುಗುಣವು ಹೆಚ್ಚು ಮುಖ್ಯವಾಗಿದೆಯೋ ಅಥವಾ ಶಿಕ್ಷಕರು ಕೊಡುವ ಜ್ಞಾನವು ಹೆಚ್ಚು ಮುಖ್ಯವಾಗಿದೆಯೋ ?— ಎಂಬ ಸಮಸ್ಯೆಯನ್ನು ಶಿಕ್ಷಣ ತಜ್ಞರು ಬಹಳ ಉತ್ಸಾಹದಿಂದ ವಾದಿಸುತ್ತ ಬಂದಿದ್ದಾರೆ. ಒಂದು ಪಂಥದವರು ಪೋಷಣೆಯ ಮೇಲ್ಮೆಯನ್ನು ಹೊಗಳಿದ್ದಾರೆ. ಇನ್ನೊಂದು ಪಂಥದವರು ಹುಟ್ಟುಗುಣದ ಮೇಲ್ಮೆಯನ್ನು ಹೊಗಳಿದ್ದಾರೆ.

## ೧. ಪೋಷಣೆಯ ಮೇಲ್ಮೆಯ ವಾದ

ಬೇರೆ ಬೇರೆ ಬಗೆಯ ಶಿಕ್ಷಣವು ದೊರೆಯುವದರಿಂದ ಜನರು ಬೇರೆ ಬೇರೆ ಬಗೆಯ ಯೋಗ್ಯತೆ, ಅಭಿರುಚಿ ಮತ್ತು ಶೀಲ ಸ್ವಭಾವಗಳನ್ನು ಪಡೆಯುತ್ತಾರೆ. ಜನರು ಇಂದ್ರಿಯಗಳ ಮುಖಾಂತರವೇ ಸಕಲ ಜ್ಞಾನ ಪಡೆಯುತ್ತಾರೆ. ಒಂದುವೇಳೆ ಇಬ್ಬರಿಗೆ ಹುಟ್ಟಿದಂದಿನಿಂದ ಒಂದೇ ಬಗೆಯಾದ ಇಂದ್ರಿಯ ಜ್ಞಾನಗಳು ಒದಗಿದರೆ, ಅವರೀರ್ವರ ಮಾನಸಿಕ ಸ್ಥಿತಿಯೂ ಒಂದೇ ಬಗೆಯಾಗಬಲ್ಲದು. ಆದರೆ ವಾಸ್ತವಿಕ ಜೀವನದಲ್ಲಿ ಈ ಬಗೆಯ ಪ್ರಯೋಗವನ್ನು ಕಾಣುವುದು ಸಾಧ್ಯವಿಲ್ಲ. ಆದುದರಿಂದ ಜನರ ಮಾನಸಿಕ ಸ್ಥಿತಿಗಳು ಬೇರೆ ಬೇರೆಯಾಗಿರುತ್ತವೆ. ಈ ಮಾತು ಜನರ ಶೀಲ ಸ್ವಭಾವಗಳಿಗೂ ಅನ್ವಯಿಸುತ್ತದೆ. ಮನುಷ್ಯನು ಪೂರ್ಣ ಒಳ್ಳೆಯವನಾಗಿ ಇಲ್ಲವೆ ಪೂರ್ಣ ಕೆಟ್ಟವನಾಗಿ ಹುಟ್ಟಿಲ್ಲ. ಅವನು ಪರರ ಸಹಾಯವಿಲ್ಲದೆ ತನ್ನ ಅಭಿಪ್ರಾಯಗಳನ್ನು ರೂಪಿಸಿಕೊಳ್ಳಲಾರ ಇಲ್ಲವೆ ಶೀಲವನ್ನು ಕಲಿತುಕೊಳ್ಳಲಾರ. ಪೂರ್ವಜರಿಂದ ದೊರೆಯುವ ವಿಚಾರಗಳು ಮತ್ತು ಸುತ್ತುಮುತ್ತಲಿನ ಸ್ಥಿತಿಗತಿಗಳು ಅವನ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡುತ್ತವೆ. ಅದರಿಂದ ಅವನಲ್ಲಿ ಅಭಿಪ್ರಾಯ ಮತ್ತು ಶೀಲಗಳು ರೂಪುಗೊಳ್ಳುತ್ತವೆ. ಶಿಕ್ಷಣದ ಮೂಲಕ ಉತ್ತಮ ಶೀಲವುಳ್ಳವರನ್ನು ತಯಾರಿಸಬಹುದು. ಇಲ್ಲವೆ ನೀಚ ಸ್ವಭಾವವುಳ್ಳವರನ್ನು ತಯಾರಿಸಬಹುದು; ಮೂರ್ಖರನ್ನು

ತಯಾರಿಸಬಹುದು ಇಲ್ಲವೆ ಬುದ್ಧಿವಂತರನ್ನು ತಯಾರಿಸಬಹುದು. ಒಟ್ಟಿನ ಮೇಲೆ ಶಿಕ್ಷಣವು ಸರ್ವಶಕ್ತವಾಗಿದೆಯೆಂಬುದೇ ಈ ವಾದದ ತಾತ್ಪರ್ಯ.

## ೨. ಹುಟ್ಟುಗುಣದ ಮೇಲ್ಮೆಯು ವಾದ

ಶೈಕ್ಷಣಿಕ ಪೋಷಣೆಯಿಂದ ಬಾಲಕನ ಹುಟ್ಟುಗುಣದ ಮೇಲೆ ಪರಿಣಾಮವಾಗುತ್ತಿದೆಯೆಂದು ಹೇಳುವುದು ಹಾಸ್ಯಾಸ್ಪದ. ಹುಟ್ಟುಗುಣವು ಪರಂಪರೆಯಿಂದ ಬಂದಿರುತ್ತದೆ. ಪೋಷಣೆಯಿಂದ ಅದು ಎಂದೂ ಸುಧಾರಿಸುವುದಿಲ್ಲ. ಮನುಷ್ಯನ ನಿಲುವು ಮತ್ತು ಮೈಕಟ್ಟುಗಳು ಅವನ ಪೂರ್ವಜರ ದೈಹಿಕ ಸ್ಥಿತಿಯ ಮೇಲೆ ಅವಲಂಬಿಸಿರುತ್ತವೆ. ಅದರಂತೆ ಅವನ ಶೀಲ ಸ್ವಭಾವಗಳು ಸಹಿತ ಅವನ ಪೂರ್ವಜರ ಆನುವಂಶಿಕ ಸಂಗತಿಗಳ ಮೇಲೆಯೇ ಅವಲಂಬಿಸಿರುತ್ತವೆ. ಮನುಷ್ಯನ ಶೈಕ್ಷಣಿಕ ವಾತಾವರಣವು ಅವನ ಗುಣಧರ್ಮಗಳನ್ನು ಹೊರಗೆಡವಲು ಸಹಾಯಕವಾಗಬಲ್ಲ ಆಕಸ್ಮಿಕ ಸಂಗತಿಯೇ ಹೊರತು, ಅವನ ಗುಣಧರ್ಮಗಳಿಗೆ ಜನ್ಮದಾಯಕ ಸಂಗತಿಯಲ್ಲ. ಅಂತೂ ಹುಟ್ಟುಗುಣವನ್ನು ತಿದ್ದಲು ಎಂದಿಗೂ ಸಾಧ್ಯವಿಲ್ಲವೆಂಬುದೇ ಈ ವಾದದ ತಾತ್ಪರ್ಯ.

## ೩. ಎರಡೂ ವಾದಗಳ ಉಪಯುಕ್ತತೆ

ಈ ಎರಡೂ ವಾದಗಳಲ್ಲಿರುವ ವಿರೋಧವು ನಿಚ್ಚಳವಾಗಿ ಕಾಣುತ್ತದೆ. ಇವುಗಳಲ್ಲಿ ಯಾವುದೊಂದು ವಾದಕ್ಕೆ ಅಂಟಿಕೊಳ್ಳುವುದು ಜಾಣತನವಲ್ಲ. ಆದರೆ ಸಂದೇಹಾಸ್ಪದ ಸಮಸ್ಯೆಯ ಎರಡು ದೃಷ್ಟಿ ಕೋನಗಳಲ್ಲಿ ಸಮನ್ವಯವನ್ನು ಉಂಟುಮಾಡುವುದೇ ಅನೇಕ ಸಲ ಜಾಣತನವೆನಿಸುತ್ತದೆ. ಮೇಲಿನ ಎರಡೂ ಪಂಥಗಳ ವಿಚಾರಗಳು ಮನುಷ್ಯನ ಬೆಳವಣಿಗೆಗೆ ಹೇಗೆ ಸಹಾಯಕವಾಗಿವೆಯೆಂಬುದನ್ನು ಮಾತ್ರ ಇಲ್ಲಿ ನಿರ್ಣಯಿಸಬೇಕಾಗಿದೆ.

## ೪. ಪೋಷಣೆಯಿಂದ ಸಾಧಿಸಬಲ್ಲ ಕಾರ್ಯ

ಈಚೆಗೆ ಮಾನಸಿಕ ಬೆಳವಣಿಗೆಯ ಸಂಗತಿಗಳನ್ನು ಜನರು ಹೆಚ್ಚೆಚ್ಚು ಸೂಕ್ಷ್ಮವಾಗಿ ಅಭ್ಯಸಿಸಹತ್ತಿದ್ದಾರೆ. ಸಣ್ಣ ವಯಸ್ಸಿನ ಅಪರಾಧಿಗಳ ಮಾನಸಿಕ ಸ್ಥಿತಿಗಳನ್ನು ಈಗ ಪರೀಕ್ಷಿಸಿದ್ದಾರೆ. ಕೆಟ್ಟ ಹುಟ್ಟುಗುಣದ ನಿಮಿತ್ಯ

ಬಾಲಕರು ಅಪರಾಧಿಗಳಾಗುತ್ತಾರೆಂದು ಮೊದಮೊದಲು ಭಾವಿಸಲಾಗಿತ್ತು. ಆದರೆ ಆಧುನಿಕ ಸಂಶೋಧನೆಗಳು ಈ ಭಾವನೆಗೆ ಪುಷ್ಟಿ ಕೊಡುತ್ತಿಲ್ಲ. ಸಣ್ಣ ವಯಸ್ಸಿನ ಬಾಲಕರನ್ನು ಅಪರಾಧಿಗಳನ್ನಾಗಿ ಮಾಡುವ ಕಾರಣಗಳು ಬಹಳ ತೊಡಕಾಗಿವೆ. ಒಂದು ಸೆರೆಮನೆಯಲ್ಲಿ ಸೇರ್ಪಡೆಯಾದ ೪೦೦೦ ಬಾಲಕರನ್ನು ಪರೀಕ್ಷಿಸಲಾಯಿತು. ಅವರಲ್ಲಿ ಕೇವಲ ನೂರಕ್ಕೆ ನಾಲ್ಕರಷ್ಟು ಬಾಲಕರು ಮಾತ್ರ ಹುಟ್ಟು ತಿಳಿಗೇಡಿಗಳಾಗಿದ್ದರು. ಈ ಪ್ರಮಾಣವು ಅಷ್ಟೇನೂ ಹೆಚ್ಚಲ್ಲ. ಇನ್ನುಳಿದ ಬಾಲಕರ ಜೀವನದಲ್ಲಿ ಹುಟ್ಟುಗುಣವು ಅಷ್ಟೇನೂ ಮಹತ್ವದ ಪಾತ್ರ ವಹಿಸಿದಂತೆ ಕಂಡುಬರಲಿಲ್ಲ. ಅವರ ಜೀವನದಲ್ಲಿ ಅವರವರ ಮನೆಯ ಸ್ಥಿತಿಗಳು ಮಾತ್ರ ಮಹತ್ವದ ಪರಿಣಾಮವನ್ನುಂಟು ಮಾಡಿದಂತೆ ಕಂಡುಬಂದಿತು. ಬಹು ಜನರಿಂದ ತುಂಬಿದ ಕುಟುಂಬಗಳು, ಜಗಳಗಂಟಿ ತಾಯಿ-ತಂದೆಗಳು, ಹಿರಿಯರಿಲ್ಲದ ಮನೆತನಗಳು, ಸ್ವೇಚ್ಛಾಪರ ವೃತ್ತಿಯ ಮನೆತನಗಳು, ಪ್ರತಿಬಂಧಕ ಶಿಸ್ತುಳ್ಳ ಮನೆತನಗಳು, ಮನೆಯ ಪ್ರಿಯಕರವಾದ ವಾತಾವರಣದಿಂದ ದೂರವಾಗಿರುವಿಕೆ—ಮೊದಲಾದವು ಬಾಲಕರನ್ನು ದುರ್ಮಾರ್ಗಕ್ಕೆ ಹಚ್ಚಿದ ಸಂಗತಿಗಳಾಗಿದ್ದವು. ಈ ಬಾಲಕರಲ್ಲಿ ಬಹುಸಂಖ್ಯಾತರು ಸೆರೆಮನೆ ಕಾಣುವ ಮುಂಚೆ ಒಂದಿಲ್ಲ ಒಂದು ಉದ್ಯೋಗದಲ್ಲಿ ತೊಡಗಿದ್ದರು. ಇದೂ ಒಂದು ಅಚ್ಚರಿಗೊಳಿಸುವಂತಹ ಸಂಗತಿಯೇ ಸರಿ. ಯಾಕಂದರೆ, ಈ ಮೊದಲು ನಿರುದ್ಯೋಗತನವು ಬಾಲಕರನ್ನು ಅಪರಾಧಿಗಳನ್ನಾಗಿ ಮಾಡುವ ಒಂದು ಮುಖ್ಯ ಕಾರಣವೆಂದು ನಂಬಲಾಗಿತ್ತು. ಈ ನಂಬುಗೆಯು ತಪ್ಪು. ಇದಕ್ಕೆ ಪ್ರತಿಯಾಗಿ, ಶಾಲೆಯಲ್ಲಿ ಆ ಬಾಲಕರಿಗೆ ದೊರೆತ ಶಿಕ್ಷಣವು ಅವರ ಮಾನಸಿಕ ಸ್ಥಿತಿಗೆ ಅಯೋಗ್ಯವಾಗಿದ್ದಿತೆಂದು ಕಂಡುಬಂದಿದೆ. ಈ ಸಂಗತಿಯು ದೋಷಯುಕ್ತ ಶಿಕ್ಷಣದಿಂದ ಬಾಲಕನ ಜೀವನದ ಮೇಲಾಗುವ ದುಷ್ಪರಿಣಾಮಗಳನ್ನು ನಿಚ್ಚಳವಾಗಿ ತೋರಿಸುತ್ತದೆ. ಇಷ್ಟೇ ಅಲ್ಲ; ಪಾಪದ ಹಾದಿಯನ್ನು ಹಿಡಿದ ಅನಂತ ದುರ್ದೈವಿ ಬಾಲಕರನ್ನು ಸರಿಯಾದ ಪೋಷಣೆಯಿಂದ ಉತ್ತಮ ಮನುಷ್ಯರನ್ನಾಗಿ ಮಾಡುವ ಶಕ್ಯತೆಯನ್ನು ಸಹ ಈ ಸಂಗತಿಯು ತೋರಿಸುತ್ತದೆ.

ಹುಟ್ಟುಗುಣದ ಮೇಲ್ಮೆಯನ್ನು ಹೊಗಳುವವರು ಮನುಷ್ಯನ ಸಹಜ ಪ್ರವೃತ್ತಿಗಳ ಬೆಳವಣಿಗೆಯಲ್ಲಿ ಸಾಮಾಜಿಕ ವಾತಾವರಣದ ಪಾತ್ರದ ಮಹತ್ವ

ವನ್ನು ಅಲಕ್ಷಿಸುತ್ತಾರೆ. ಆದುದರಿಂದ ಅವರು ಮಾನವನ ಪ್ರಗತಿಯ ಬಗ್ಗೆ ಅಷ್ಟೊಂದು ಆಶೆಯನ್ನು ಇಟ್ಟುಕೊಂಡಿಲ್ಲ. ಆದರೆ ಹೀಗೆ ನಿರಾಶೆಪಡುವುದು ತಪ್ಪು. ಯುದ್ಧಕಾಲದಲ್ಲಿ ಅನೇಕ ಮಾನಸ ಶಾಸ್ತ್ರಜ್ಞರು ಸೈನಿಕರ ಮಧ್ಯೆ ಕಾರ್ಯ ಮಾಡುವ ಭಾಗ ಬಿತ್ತು. ಸೈನಿಕರ ಸಂಗಡ ಅವರ ಸಂಬಂಧವು ನಿಕಟವಾಯಿತು. ಆಗ ಅವರಿಗೆ ಸೈನಿಕರ ಸ್ವಾಭಾವಿಕ ಬುದ್ಧಿ ಚಾತುರ್ಯ ಗಳು ಕುಗ್ಗಿದುದು ಕಂಡುಬಂದಿತು. ಈ ಕುಗ್ಗುವಿಕೆಗೆ ನಿರುತ್ಸಾಹದಾಯಕ ಸಾಮಾಜಿಕ ಪದ್ಧತಿ ಮತ್ತು ಅಂಧಃಕಾರಮಯ ಶಿಕ್ಷಣಗಳೇ ಕಾರಣವಾಗಿ ದ್ದವು. ನಾಗರಿಕ ಜನಾಂಗಗಳಲ್ಲಿಯೇ ಹೀಗಾಗುತ್ತಿರುವಾಗ, ಅನಾಗರಿಕ ಜನಾಂಗಗಳ ಬಗ್ಗೆ ಹೇಳುವುದೇನಿದೆ! ಇಲ್ಲಿ ಮ್ಯುರೆ ನಡುಗಡ್ಡೆಯ ಕಾಡು ಜನಾಂಗದ ನಿದರ್ಶನವನ್ನು ತೆಗೆದುಕೊಳ್ಳಬಹುದು. ಆ ಜನರಿಗೆ ಆರನೆಯ ಸಂಖ್ಯೆಗಿಂತಲೂ ಹೆಚ್ಚಿನ ಸಂಖ್ಯೆಗಳನ್ನು ಎಣಿಸಲು ಶಬ್ದಗಳೇ ಇಲ್ಲ. ದೊಡ್ಡ ಸಂಖ್ಯೆಗಳ ಕಲ್ಪನೆಯನ್ನು ಸಹ ಅವರು ಮಾಡಲಾರರು. ಅಂದಮೇಲೆ ಅವರ ಹುಟ್ಟುಗುಣದಲ್ಲಿ ಗಣಿತದ ಜಾಣ್ಮೆಯು ಇರಲಿಕ್ಕಿಲ್ಲೆಂದು ಸುಲಭ ವಾಗಿ ತರ್ಕ ಮಾಡಬಹುದು. ಆದರೆ ಈ ಜನಾಂಗದ ಹಲವು ಬಾಲಕರಿಗೆ ಸ್ಕಾಟಲಂಡದ ಪಾದ್ರಿಯೊಬ್ಬನು ಶಿಕ್ಷಣ ಕೊಟ್ಟನು. ಅದರ ಪರಿಣಾಮ ವಾಗಿ ಆ ಬಾಲಕರು ಪಡೆದ ಗಣಿತದ ಪ್ರಾವೀಣ್ಯವು ನಮ್ಮ ಶಾಲೆಗಳ ಪರೀಕ್ಷಕರನ್ನೂ ಸಹ ಅಚ್ಚರಿಗೊಳಿಸುವಂತಿತ್ತು. ಈ ನಿದರ್ಶನವು ನಿರಾಶಾ ಮಯ ಮನಸ್ಥಿತಿಯಲ್ಲಿಯೂ ಸಹ ಆಶಾಂಕುರವನ್ನು ಹುಟ್ಟಿಸುತ್ತದೆ.

### ೫. ಹುಟ್ಟುಗುಣ ಅಲಕ್ಷಿಸುವಿಕೆಯಿಂದ ಒದಗುವ ಹಾನಿ

ಪೋಷಣೆಯ ಮೇಲ್ಮೆಯನ್ನು ಹೊಗಳುವ ಪಂಥವು ಹುಟ್ಟುಗುಣದ ಮಹತ್ವವನ್ನು ಅಲಕ್ಷಿಸುತ್ತದೆ. ಅದು ವಿಚಾರಗಳ ಪರಿಣಾಮಕಾರಿತ್ವದಲ್ಲಿ ವಿಶ್ವಾಸವನ್ನಿಟ್ಟಿದೆ. ಈ ವಿಶ್ವಾಸವು ಸದುದ್ದೇಶಭರಿತವಾಗಿದೆ; ಆದರೆ ಅಷ್ಟೊಂದು ಸಮಂಜಸವಾಗಿಲ್ಲ. ಶಿಕ್ಷಣದ ಬಲದಿಂದ ಬೇಕಾದಂತಹ ವ್ಯಕ್ತಿತ್ವ ವನ್ನು ರೂಪಿಸಬಹುದೆಂದು ಇದು ಸೂಚಿಸುತ್ತದೆ. ಹೀಗೆ ಕೃತ್ರಿಮವಾಗಿ ವ್ಯಕ್ತಿತ್ವವನ್ನು ರೂಪಿಸಬಯಸುವ ವಿಚಾರವು ವ್ಯಕ್ತಿತ್ವದ ನೈಜ ಸ್ವಭಾವಕ್ಕೆ ವಿರೋಧವಾಗಿದೆ. ಈ ದೃಷ್ಟಿಕೋನವು ಹುಟ್ಟುಗುಣದ ಬಲವನ್ನು ಪೂರ್ಣ ಅಲಕ್ಷಿಸುತ್ತದೆ. ಹುಟ್ಟುಗುಣವು ವ್ಯಕ್ತಿಯ ಜೀವನ ವಿಕಾಸದ ಪರಿಮಿತಿ

ಯನ್ನು ನಿಶ್ಚಿತಪಡಿಸುವ ಶಾಶ್ವತ ವಸ್ತು. ಇದನ್ನು ಅಲಕ್ಷಿಸುವದರಿಂದ ಶಿಕ್ಷಣರಂಗದಲ್ಲಿ ಬಹಳ ಅಪವ್ಯಯಕ್ಕೆ ಕಾರಣವಾಗುತ್ತದೆ. ಈ ಅಪವ್ಯಯ ವನ್ನು ಕೆಲವರು ಲೋಕಸತ್ತಾತ್ಮಕ ಶಿಕ್ಷಣ ಪದ್ಧತಿಯ ದೊಡ್ಡ ದೋಷ ವೆಂದು ಗಣಿಸುತ್ತಾರೆ. ಯಾಕಂದರೆ, ಸಾರಾಸಾರ ವಿಚಾರ ಮಾಡದೆ ಎಲ್ಲ ರಿಗೂ ಒಂದೇ ಬಗೆಯಾದ ಶಿಕ್ಷಣವನ್ನು ಕೊಡಹತ್ತಿದರೆ, ಮಂದ ಬುದ್ಧಿಯ ವರಿಗೂ ಚುರುಕು ಬುದ್ಧಿಯವರಿಗೂ ಕೂಡಿಯೇ ಅನ್ಯಾಯ ಮಾಡಿದಹಾಗೆ ಆಗುತ್ತದೆ. ಮಂದ ಬುದ್ಧಿಯವರಿಗೆ ಸಾಮಾನ್ಯ ಶಿಕ್ಷಣವು ಅರ್ಥವಾಗದೆ ಉಳಿಯಬಹುದು; ಚುರುಕು ಬುದ್ಧಿಯವರಿಗೆ ಸಾಮಾನ್ಯ ಶಿಕ್ಷಣವು ಸಾಕಷ್ಟು ಅವಕಾಶಕೊಡದೆ ಅವರ ಬುದ್ಧಿಯನ್ನು ಮಸಣಿಸಿಬಿಡಬಹುದು. ಬುದ್ಧಿವಂತ ಲೋಕಸತ್ತಾತ್ಮಕ ಜನಾಂಗವು ತನ್ನ ಜನತೆಯಲ್ಲಿ ಕಾಣಬರುವ ಎಲ್ಲ ಚತುರ ಬಾಲಕರಿಗೂ ಅವರವರ ಬುದ್ಧಿಬಲಗಳಿಗೆ ಉಚಿತವಾದ ಶಿಕ್ಷಣವನ್ನೊದಗಿಸು ತ್ತದೆ. ಹೀಗೆ ಮಾಡುವುದರಿಂದ ಅದು ಅವರ ಬುದ್ಧಿಬಲದ ಪೂರ್ಣ ಲಾಭ ಪಡೆದುಕೊಳ್ಳುತ್ತದೆ. ಸಂತತ ಶೈಕ್ಷಣಿಕ ಪರಿಶ್ರಮದಿಂದ ಒಂದು ಜನಾಂಗದ ಬೌದ್ಧಿಕ ಮತ್ತು ಭಾವನಾತ್ಮಕ ದೃಷ್ಟಿಕೋನಗಳನ್ನೂ ಬದಲಿಸಬಹುದು. ಈ ಮಾತಿಗೆ ಸಂದೇಹವೇ ಇಲ್ಲ. ಜಪಾನವು ಒಂದು ಆಧುನಿಕ ರಾಷ್ಟ್ರ ವಾದುದು ಈ ಮಾತಿಗೆ ಒಳ್ಳೆಯ ನಿದರ್ಶನವಾಗಿದೆ. ಜರ್ಮನಿಯು ಒಂದು ಯುದ್ಧಾಸಕ್ತ ರಾಷ್ಟ್ರವಾದುದೂ ಸಹಿತ ಆ ದೇಶದ ಶೈಕ್ಷಣಿಕ ಪದ್ಧತಿಯ ಫಲ ವೆಂದು ಹೇಳಬಹುದು. ಹಾಗಾದರೆ, ಸನ್ಮಾರ್ಗವನ್ನು ತೋರಿಸುವ ಶಿಕ್ಷಣ ವನ್ನು ಒದಗಿಸುವುದರಿಂದ ಮಾನವ ಕುಲವನ್ನೇ ಪರಿಪರಿಯಿಂದ ಪೀಡಿಸಿದ ದುಷ್ಟ ಪ್ರಯತ್ನಗಳನ್ನು ತಡೆಯಬಹುದಲ್ಲವೇ?

## ೬. ವ್ಯಕ್ತಿ ವಿಕಾಸದ ಸಾಮಗ್ರಿಗಳು ; ಹುಟ್ಟುಗುಣ ಮತ್ತು ಪೋಷಣೆ

ಸಾಮಾಜಿಕ ಪರಂಪರೆ ಮತ್ತು ವಾತಾವರಣಗಳು ಶಿಕ್ಷಣದ ದೃಷ್ಟಿ ಯಿಂದ ಮಹತ್ವದ ಸಂಗತಿಗಳಾಗಿವೆ. ಶಿಕ್ಷಣವೆಂದರೆ ಒಂದು ಉತ್ತಮ ಪೋಷಣಾತ್ಮಕ ವಾತಾವರಣವನ್ನು ಕಲ್ಪಿಸುವುದೆಂದು ಹಿಂದೆಯೇ ಹೇಳ ಲಾಗಿದೆ. ಆದರೂ ಇದು ಶಿಕ್ಷಣದ ಮೊದಲ ಹೆಜ್ಜೆ ಮಾತ್ರ. ಇದರನಂತರ ಕಾರ್ಯರೂಪದಲ್ಲಿ ಬರುವ ಬಾಲಕನ ಸ್ವತಂತ್ರ ಚಟುವಟಿಕೆಯು ಶಿಕ್ಷಣದಲ್ಲಿ

ಅತಿ ಮುಖ್ಯವಾಗಿದೆ. ಪೋಷಣಾತ್ಮಕ ವಾತಾವರಣ ಮತ್ತು ನಿಸರ್ಗದತ್ತ ಗುಣಗಳೆರಡೂ ಮಾನವನ ವ್ಯಕ್ತಿತ್ವ ವಿಕಾಸಕ್ಕೆ ಬೇಕಾದ ಮೂಲ ಸಾಮಗ್ರಿಗಳು. ಅವುಗಳಿಂದ ವ್ಯಕ್ತಿತ್ವವು ತಾನಾಗಿಯೇ ರೂಪುಗೊಳ್ಳುವುದಿಲ್ಲ. ಮಾನವ ಜೀವವು ನಿರ್ಮಾಪಕ ಶಕ್ತಿಯ ಕೇಂದ್ರವಾಗಿರುತ್ತದೆ. ಅದು ತನಗೆ ದೊರೆತ ಸಾಮಗ್ರಿಗಳನ್ನು ತನ್ನ ವ್ಯಕ್ತಿತ್ವ ವಿಕಾಸಕ್ಕಾಗಿ ಬೇಕಾದ ಹಾಗೆ ಉಪಯೋಗಿಸಿಕೊಳ್ಳಬಲ್ಲದು. ಈ ಸ್ವತಂತ್ರ ಚಟುವಟಿಕೆಯೇ ಮನುಷ್ಯ ಜೀವದ ಹೆಗ್ಗುರುತು. ಈ ಸ್ವತಂತ್ರ ಚಟುವಟಿಕೆಯೇ ಪೋಷಣೆ ಮತ್ತು ನಿಸರ್ಗದತ್ತ ಗುಣಗಳನ್ನು ಬಳಸಿಕೊಳ್ಳಬಲ್ಲ ಶಕ್ತಿ. ಅಂದಮೇಲೆ ಈ ಸ್ವಯಂಪ್ರೇರಣಾತ್ಮಕ ಶಕ್ತಿಯೇ ಶಿಕ್ಷಣದಲ್ಲಿ ಅತ್ಯಂತ ಶ್ರೇಷ್ಠ ವಸ್ತು. ಪೋಷಣೆ ಮತ್ತು ಹುಟ್ಟುಗುಣಗಳೆರಡೂ ಈ ಶಕ್ತಿಗೆ ಕೇವಲ ಆಧೀನವಾಗಿರತಕ್ಕ ಉಪಯುಕ್ತ ಸಾಮಗ್ರಿಗಳೇ ಸರಿ. ಇದು ಮೇಲಿನ ಎರಡು ವಾದಗಳನ್ನೂ ಸಮನ್ವಯಗೊಳಿಸುವಂತಹ ಸಿದ್ಧಾಂತ.



# ೪. ಕ್ರೀಡಾತ್ಮಕ ಶಿಕ್ಷಣ

ಸಣ್ಣ ಮಕ್ಕಳ ಆಟದಲ್ಲಿ ಅವರ ಬುದ್ಧಿ ಬಲವು ನಿಚ್ಚಳವಾಗಿ ಹೊರ ಬೀಳುತ್ತದೆ. ಈ ಬುದ್ಧಿಬಲವನ್ನು ಉಪಯೋಗಿಸಿಕೊಳ್ಳುವ ಗುಟ್ಟನ್ನು ಶಿಕ್ಷಕರು ಅರಿತದ್ದಾದರೆ ಶಿಕ್ಷಣವು ಬಹಳ ಮುಂದುವರಿಯುತ್ತಿದ್ದಿತು. ಅನೇಕ ಸಂಶೋಧಕರು, ಕವಿಗಳು, ಕಲಾವಿದರು ಮತ್ತು ಕಾರ್ಯಧುರೀಣರು ತಮಗೆ ದೊರೆತ ಶಿಕ್ಷಣದಿಂದ ಒದಗಿದ ಆತಂಕಗಳನ್ನು ಬಹಳವಾಗಿ ಸೂಚಿಸಿದ್ದಾರೆ. ಅವರ ನಿರ್ಮಾಪಕ ಶಕ್ತಿಗಳು ಅತ್ಯಂತ ಬಲಿಷ್ಠವಾಗಿರಲೆಬೇಕು. ಅಂತೆಯೇ ಅವರು ಆ ಆತಂಕಗಳನ್ನು ಲೆಕ್ಕಿಸದೆ ತಮ್ಮ ಕ್ರೀಡಾತ್ಮಕ ಕನಸುಗಳನ್ನು ನನಸನ್ನಾಗಿ ಮಾಡಿ ಹೋಗಿದ್ದಾರೆ. ಅವರಿಂದ ಜಗತ್ತಿನ ಉದ್ಧಾರವಾಗಿದೆ. ಆದರೆ ಅಷ್ಟು ಬುದ್ಧಿಶಾಲಿಗಳಲ್ಲದ ಅನಂತ ಜನರ ಜೀವನವನ್ನು ಇಂತಹ ಶಿಕ್ಷಣವು ನಿರರ್ಥಕಗೊಳಿಸಿರಬೇಕಲ್ಲವೆ ?

## ೧. ಶೈಕ್ಷಣಿಕ ಸುಧಾರಣೆಯ ಉದ್ದೇಶ

ಇಂದಿನ ಶಿಕ್ಷಣದಲ್ಲಿ ಸಮಾವೇಶವಾಗಿರುವ ನಿರ್ಬಂಧಗಳೇ ಇದಕ್ಕೆ ಬಹು ಮಟ್ಟಿಗೆ ಕಾರಣಗಳಾಗಿವೆ. ಈ ಬಗೆಯ ಹಾನಿಯನ್ನು ಕಡಿಮೆ ಮಾಡಬೇಕಾದರೆ ಶಿಕ್ಷಣವು ಕ್ರೀಡಾತ್ಮಕ ಬೌದ್ಧಿಕ ಪ್ರವೃತ್ತಿಗೆ ಪೋಷಣೆ ಕೊಡಬೇಕು. ಜೀವನದ ಸಂಗಡ ಪ್ರಯೋಗಮಾಡಿ ನೋಡುವುದು ಮಗುವಿನ ಸಹಜ ಪ್ರವೃತ್ತಿ. ಈ ಕ್ರೀಡಾತ್ಮಕ ಪ್ರವೃತ್ತಿಯು ಮಗುವಿನ ಶಿಕ್ಷಣದಲ್ಲಿ ಮಾರ್ಗದರ್ಶಿಯಾಗಿರಬೇಕು. ಮಗುವು ತನ್ನ ಆಟದಲ್ಲಿ ಗಂಭೀರ ಆಸಕ್ತಿಯನ್ನು ತೋರಿಸುತ್ತದೆ. ಅದರಂತೆ ನಾವಾದರೂ ಮಗುವಿನ ಜೀವನದ ಬಗ್ಗೆ ಗಂಭೀರವಾದ ಆಸಕ್ತಿಯನ್ನು ವಹಿಸಬೇಕು. ಕವಿ, ಕಲಾವಿದ, ನಾಟಕಕಾರ, ಯಂತ್ರಜ್ಞ, ಭೂನಿರೀಕ್ಷಕ, ನಾವಿಕ, ವೈಮಾನಿಕ—ಮೊದಲಾದ ನಿರ್ಮಾಣಕರ್ತರನ್ನು ನಾವು ಗೌರವಿಸುತ್ತೇವೆ. ಅದರಂತೆ ಮಗುವನ್ನು ಸಹ ಗೌರವಿಸಬೇಕು. ಮಗುವಿನ ವ್ಯಕ್ತಿತ್ವದಿಂದ ಹೊರಬೀಳುವ ಬಗೆಬಗೆಯ ಸ್ವತಂತ್ರ ಚಟುವಟಿಕೆಗಳಿಗೆ ನಾವು ಉತ್ತೇಜನ ಕೊಡಬೇಕು.

ಕ್ರೀಡೆಯು ಶಿಕ್ಷಣದ ಸೂತ್ರವಾಗಿದೆ. ಅದರ ನಿಜ ಸ್ವರೂಪವನ್ನು ತಿಳಿದುಕೊಂಡರೆ ಶಿಕ್ಷಣದ ಹಲವು ವ್ಯಾವಹಾರಿಕ ಸಮಸ್ಯೆಗಳನ್ನು ಬಿಡಿಸ

ಬಲ್ಲೆವು. ಕ್ರೀಡೆಯಲ್ಲಿ ಬಾಲಕರ ನಿರ್ಮಾಪಕ ಪ್ರವೃತ್ತಿಗಳು ನಿಚ್ಚಳವಾಗಿ ಕಾಣಿಸಿಕೊಳ್ಳುತ್ತವೆ. ಕಲಾಕೌಶಲ್ಯಗಳು, ವೈಜ್ಞಾನಿಕ ಸಂಶೋಧನೆಗಳು ಮೊದಲಾದ ಚಟುವಟಿಕೆಗಳು ಕ್ರೀಡೆಯಿಂದ ಹೊರಹೊಮ್ಮುತ್ತವೆ. ವ್ಯಕ್ತಿತ್ವ ಬೆಳವಣಿಗೆಗೂ ಕ್ರೀಡೆಗೂ ಪರಸ್ಪರ ಹೊಂದಿಕೆಯಿದೆ. ವ್ಯಕ್ತಿಯು ತನ್ನ ಜೀವನದ ಸ್ವತಂತ್ರ ಚಟುವಟಿಕೆಗಳನ್ನು ಪ್ರಕಟಗೊಳಿಸುವ ಉತ್ಕಟ ಇಚ್ಛೆಯನ್ನ ಕ್ರೀಡೆಯಲ್ಲಿ ವ್ಯಕ್ತಪಡಿಸುತ್ತಾನೆ. ಆದಕಾರಣ, ಕ್ರೀಡೆಗೆ ತೃಪ್ತಿಕರ ಸಾಧ್ಯವು ಅವಕಾಶವನ್ನು ಕಲ್ಪಿಸಿಕೊಡುವುದೇ ಶಿಕ್ಷಣರಂಗದಲ್ಲಿ ಉಂಟಾಗ ಬೇಕಾದ ನಿಜವಾದ ಸುಧಾರಣೆಯ ಉದ್ದೇಶ.

## ೨. ಸಣ್ಣಮಕ್ಕಳ ಭಾವನಾಪರ ಕ್ರೀಡೆ

ಸಣ್ಣಮಕ್ಕಳ ಕ್ರೀಡೆಯಲ್ಲಿ ಕಾಲ್ಪನಿಕ ಭಾವನಾಪರತೆಯ ಅಂಶವಿರುತ್ತದೆ. ಹಿರಿಯರಲ್ಲಿ ವಾಸ್ತವಿಕ ಭಾವನೆಯು ಹೆಚ್ಚು ಪ್ರಬಲವಾಗಿರುತ್ತದೆ. ನಿಜ ಸಂಗತಿಗಳು ಮತ್ತು ಕಾಲ್ಪನಿಕ ವಿಚಾರಗಳಲ್ಲಿರುವ ಅಂತರವು ಹಿರಿಯರಿಗೆ ಸಹಜವಾಗಿ ಹೊಳೆಯುತ್ತದೆ. ಆದರೆ ಸಣ್ಣಮಕ್ಕಳಿಗೆ ಇದು ಸುಲಭವಾಗಿ ಹೊಳೆಯುವುದಿಲ್ಲ. ಕಟುವಾದ ಸ್ವಾನುಭವದಿಂದ ಅವರು ಜಗತ್ತಿನ ವಾಸ್ತವಿಕತೆಯನ್ನು ಕ್ರಮೇಣ ಅರಿತುಕೊಳ್ಳಬಲ್ಲರು. ಸಣ್ಣ ಮಕ್ಕಳಲ್ಲಿ ಅಗಾಧವಾದ ಕಲ್ಪನಾಶಕ್ತಿಯು ಇರುವಂತೆ ಭಾಸವಾದರೂ, ನಿಜವಾಗಿ ಅದು ಇರುವುದಿಲ್ಲ. ಅವರು ಜಗತ್ತನ್ನು ಇದ್ದಕ್ಕಿದ್ದಹಾಗೆ ಅರ್ಥ ಮಾಡಿಕೊಳ್ಳಲಾರರು. ಕಾಲ್ಪನಿಕ ಶಕ್ತಿಯಿಂದ ಹೊರಹೊಮ್ಮುವಂತೆ ಕಾಣುವ ಕೃತಿಗಳು ನಿಜವಾಗಿ ಬಾಲಕರ ಈ ದೌರ್ಬಲ್ಯದಿಂದ ಹೊರಬೀಳುತ್ತವೆ.

ಆಟದಲ್ಲಿ ತಲ್ಲೀನವಾದ ಮಗುವು ತನ್ನ ವಿಚಾರಗಳಿಗೆ ಒಗ್ಗದೆ ಇರುವ ನಿಜ ಸಂಗತಿಗಳನ್ನು ಕಡೆಗಣಿಸುತ್ತದೆ. ಒಂದು ಮುರುಕು ಪೆಟ್ಟಿಗೆಯನ್ನೇ ಸ್ವರ್ಗವೆಂದು ತಿಳಿದು ಅದನ್ನು ಮುತ್ತಿಗೆ ಹಾಕುತ್ತದೆ; ಒಡಕು ಮಡಿಕೆಯನ್ನು ಒಡೆದು ರಾಕ್ಷಸನನ್ನು ಸಂಹರಿಸುತ್ತದೆ; ನಿರ್ಜೀವ ಕಂಬವನ್ನೇ ವೈರಿಯೆಂದು ಭಾವಿಸಿ ಅದರ ಸಂಗಡ ಕಾದಾಡುತ್ತದೆ. ಹೀಗೆ ಮಗುವು ತನ್ನ ಭಾವನಾ ಪ್ರಪಂಚದಲ್ಲಿ ಮಗ್ನವಾಗಿರುತ್ತದೆ. ಆದಾಗ್ಯೂ ಸಮೀಪದಲ್ಲಿಯೇ ತನ್ನ ತಾಯಿಯು ಕುಳಿತಿರುವಳೆಂಬ ಸಂಗತಿಯ ನಿಚ್ಚಳವಾದ ಅರಿವು ಸಹ ಮಗುವಿಗಿರುತ್ತದೆ.

ತನ್ನ ಮಾನಸಿಕ ಸ್ಥೈರ್ಯವನ್ನು ಕದಡಿಸುವ ಸಂಗತಿಗಳನ್ನು ಮಗುವು ಒಪ್ಪುವುದಿಲ್ಲ. ಆ ಸಂಗತಿಗಳಿಗೆ ಮಗುವು ಕಲ್ಪನೆಯ ಆಭರಣ ತೊಡಿಸುತ್ತದೆ. ಹೀಗೆ ಆಟದಲ್ಲಿ ಮಗ್ನವಾದ ಮಗುವಿನ ಮಾನಸಿಕ ಸ್ಥಿತಿಯು ಕೆಲಮಟ್ಟಿಗೆ ಹುಚ್ಚನ ಮಾನಸಿಕ ಸ್ಥಿತಿಯನ್ನು ಹೋಲುತ್ತದೆ. ಹುಚ್ಚನಂತೆ ಮಗುವು ಸಹ ಕೆಲವೊಂದು ವಿಚಿತ್ರ ವಿಚಾರಗಳಿಗೆ ಮಾರುಹೋಗಿರುತ್ತದೆ. ವಾಸ್ತವಿಕ ಜಗತ್ತಿಗೆ ಹೊಂದಿಕೆಯಿರದ ಈ ವಿಚಾರಗಳು ಅವನ ಜೀವನದ ಓಘವನ್ನೇ ನಿಯಂತ್ರಿಸುತ್ತಿರುತ್ತವೆ. ಆದರೆ ಈ ಹೋಲಿಕೆಯನ್ನು ಮುಂದುವರಿಸಕೂಡದು. ಯಾಕಂದರೆ, ಅವಶ್ಯವೆನಿಸಿದಾಗ ಮಗುವು ತನ್ನ ಮಾಯಾ ಪ್ರಪಂಚದಿಂದ ಪಾರಾಗಬಲ್ಲದು. ಹುಚ್ಚನು ಹೀಗೆ ಪಾರಾಗಲಾರನು. ಹುಚ್ಚನ ಭ್ರಾಂತಿಗಳು ಅವನ ದುರ್ಬಲ ಮಾನಸಿಕ ಸ್ಥಿತಿಯಿಂದ ಉಂಟಾಗುತ್ತದೆ. ಅರ್ಥವಾಗದ ಈ ಜಗತ್ತಿನ ಗುರುತರವಾದ ಹೊರೆಯನ್ನು ಹೊರಲಾರದೆ ಅವನು ತನ್ನ ಭ್ರಾಂತಿಗಳಲ್ಲಿ ವಿಶ್ರಮಿಸುತ್ತಾನೆ. ಹುಚ್ಚನ ದುರ್ಬಲ ಮನಸ್ಸು ನೈಜ ವಾತಾವರಣದಿಂದ ತನ್ನ ಸಂಬಂಧವನ್ನು ಕಡಿದುಕೊಳ್ಳುತ್ತದೆ. ವಸ್ತು ಸ್ಥಿತಿಗತಿಗಳನ್ನು ಕಡೆಗಣಿಸಿ ಅವನು ತನ್ನ ಇರುವಿಕೆಯನ್ನು ಸುಲಭ ಮಾಡಿಕೊಳ್ಳಲು ಪ್ರಯತ್ನಿಸುತ್ತಿರುತ್ತಾನೆ. ಆದರೆ ಮಗುವಿನ ಮಾನಸಿಕ ಸ್ಥಿತಿಯು ಇಂತಹ ದೌರ್ಬಲ್ಯದಿಂದ ದೂರವಾಗಿರುತ್ತದೆ. ಅದರ ಮಾನಸಿಕ ಶಕ್ತಿಯು ಅಪರಿಮಿತವಾಗಿರುತ್ತದೆ. ಆ ಶಕ್ತಿಯ ಕೆಲವಂಶವನ್ನೇ ಅದು ತನ್ನ ವಾಸ್ತವಿಕ ಜಗತ್ತಿನ ವ್ಯವಹಾರದಲ್ಲಿ ವಿನಿಯೋಗಿಸಬಲ್ಲದು. ಯಾಕಂದರೆ, ಅದರಲ್ಲಿ ನಿಜ ಜಗತ್ತಿನ ಸಂಗಡ ವ್ಯವಹರಿಸಬಲ್ಲ ಪರಿಮಿತಿಯು ಮಿತವಾಗಿರುತ್ತದೆ. ಇನ್ನುಳಿದ ಮಾನಸಿಕ ಶಕ್ತಿಯು ಮಗುವಿನ ಜೀವನಕ್ಕೆ ಒಂದಿಲ್ಲ ಒಂದು ರೀತಿಯಿಂದ ಚೇತನೆಯನ್ನು ಕೊಡುತ್ತದೆ. ಆಗ ಅವನ ಜೀವನದ ಸಾವಿರಾರು ಕಾಲ್ಪನಿಕ ಪ್ರಯೋಗಗಳ ಮುಖಾಂತರ ಅದು ಹೊರಬೀಳುತ್ತದೆ. ಇದರಿಂದ ಮಗುವಿನ ಅನುಭವವು ಹೆಚ್ಚುತ್ತದೆ. ಅವನ ಜೀವನ ವಿಕಾಸ ಹೊಂದುತ್ತದೆ. ಹೀಗೆ ಭಾವನಾಪರ ಕ್ರೀಡೆಯೆಂಬ ಜಾದೂವಿನ ಬಲದಿಂದ ಮಗುವು ಜಗತ್ತಿನ ವಾಸ್ತವಿಕತೆಯನ್ನು ಜಯಿಸುತ್ತದೆ; ಅದರಿಂದ ತನ್ನ ಅನಂತ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳುತ್ತದೆ. ಆದರೆ ಮಗುವು ಜಗತ್ತಿನ ವಾಸ್ತವಿಕತೆಗಿಂತಲೂ ತನ್ನ ಕಾಲ್ಪನಿಕ ಜಗತ್ತನ್ನೇ ಹೆಚ್ಚಾಗಿ ಪ್ರೀತಿಸುತ್ತದೆಯೆಂದು ತಿಳಿದುಕೊಳ್ಳಕೂಡದು. ಭಾವನಾಪರ

ಕ್ರೀಡೆಯು ಬಾಲ್ಯದ ಒಂದು ನಿಜವಾದ ಕೊರತೆಯನ್ನು ಪೂರೈಸುತ್ತದೆ. ಆದುದರಿಂದ, ಎಳೆಯ ವಯಸ್ಸಿನ ಬಾಲಕರ ಶಿಕ್ಷಣದಲ್ಲಿ ಈ ಗುಣದ ಸದುಪಯೋಗ ಪಡಿಸಿಕೊಳ್ಳುವುದು ಉಚಿತ.

## ೩. ಕ್ರೀಡೆ ಮತ್ತು ಕಾರ್ಯ

ಈಗ ಕ್ರೀಡೆ ಮತ್ತು ಕಾರ್ಯಗಳ ಸ್ವಭಾವವನ್ನು ವಿವರಿಸುವುದು ಅವಶ್ಯವಿದೆ. ಕ್ರೀಡೆಯೆಂದರೆ ಆನಂದದಾಯಕ ನಿರರ್ಥಕ ಚಟುವಟಿಕೆಯೆಂದೂ, ಕಾರ್ಯವೆಂದರೆ ಒಂದು ಉಪಯುಕ್ತ ಚಟುವಟಿಕೆಯೆಂದೂ ಕೆಲವರು ತಿಳಿಯುತ್ತಾರೆ. ಆದರೆ ಇದು ಸಮಂಜಸವಲ್ಲ. ನಿಜವಾಗಿ ನೋಡಿದರೆ, ಕ್ರೀಡೆಯೇ ವ್ಯಕ್ತಿಯಲ್ಲಿ ಮೇಲ್ತರಗತಿಯ ಶಿಸ್ತಿನ ಕಲ್ಪನೆಯನ್ನು ಒಡಮೂಡಿಸುತ್ತದೆ. ನಟರು ಮತ್ತು ಸಂಗೀತಗಾರರು ಮೊದಲಾದ ಕಲಾವಿದರು ತಾವು ಆಟಗಾರರು ಎಂಬ ಮಾತನ್ನು ಒಪ್ಪಿಕೊಳ್ಳುತ್ತಾರೆ. ಆದರೆ ಅವರ ಚಟುವಟಿಕೆಯು ನಿರರ್ಥಕವಾದುದು ಎಂದು ಹೇಳಿದರೆ ಅವರು ಆಕ್ಷೇಪಿಸಬಹುದು.

ಕಾರ್ಯದಲ್ಲಿ ಅರ್ಥವಿಲ್ಲದ ದುಡಿಮೆಯನ್ನೊಳಗೊಂಡ ಕಾರ್ಯವಿದೆ; ಕಾರ್ಯತತ್ಪರನನ್ನು ಪವಿತ್ರಗೊಳಿಸುವಂತಹ ಕಾರ್ಯವೂ ಇದೆ. ಹಾಗೆಯೇ ಸಹ ಕ್ರೀಡೆಯಲ್ಲಿ ವ್ಯರ್ಥ ಕಾಲಹರಣಮಾಡುವ ಕ್ರೀಡೆ ಇದ್ದಂತೆ, ಉಚ್ಚತಮ ಗುರಿಯ ಸಾಧನೆಗಾಗಿ ಹೆಣಗುವ ಗಂಭೀರ ಸ್ವರೂಪದ ಕ್ರೀಡೆಯಾದರೂ ಇದೆ. ನಿರರ್ಥಕವಾದ ಕಾರ್ಯ ಮತ್ತು ಕ್ರೀಡೆಗಳೆರಡೂ ಒಂದಕ್ಕೊಂದು ವಿರೋಧವಾಗಿವೆ. ಆದರೆ ಮೇಲ್ತರಗತಿಯ ಉದ್ದಿಷ್ಟ ಸಾಧನೆಯ ಕಾರ್ಯ ಮತ್ತು ಕ್ರೀಡೆಗಳೆರಡೂ ಒಂದಕ್ಕೊಂದು ಹೊಂದಿಕೊಂಡಿವೆ. ಅವು ಒಂದಕ್ಕೊಂದು ಪೂರಕ ವಿಚಾರಗಳು.

ಕ್ರೀಡೆಗೆ ನಾವು ಸ್ವಾತಂತ್ರ್ಯವೆಂದೂ ಕಾರ್ಯಕ್ಕೆ ಶಿಸ್ತು ಎಂದೂ ಕರೆಯಬಹುದು. ಸ್ವಚ್ಛಂದ ನಡತೆಗೆ ಸ್ವಾತಂತ್ರ್ಯವೆನ್ನುವುದಿಲ್ಲ. ಅದರಂತೆ ಕೇವಲ ನಿರ್ಬಂಧನೆಗಳಿಂದ ತುಂಬಿದ ದುಡಿಮೆಗೆ ಶಿಸ್ತು ಎಂದು ಕರೆಯುವುದಿಲ್ಲ. ಒಬ್ಬನು ತಾನು ಆಯ್ದುಕೊಂಡ ಗುರಿಯನ್ನು ಸಾಧಿಸಬೇಕಾದರೆ, ತನಗೆ ಯೋಗ್ಯ ಮಾರ್ಗದರ್ಶನ ಮಾಡಬಲ್ಲ ರೀತಿಗಳ ಕಟ್ಟಿಗೆ ಒಳಗಾಗಿ ಅವನು ನಡೆಯಬೇಕಾಗುತ್ತದೆ. ಅಂದರೆ ಮಾತ್ರ ಅವನಿಗೆ ಸ್ವಾತಂತ್ರ್ಯದ ಉಚ್ಚತಮ ಫಲಗಳು ಲಭಿಸುತ್ತವೆ. ಒಬ್ಬ ಸಂಗೀತಗಾರನು ತನ್ನ ಸಂಗೀತದ

ರಸ–ಮಾಧುರ್ಯಗಳನ್ನು ವ್ಯಕ್ತಪಡಿಸುವಾಗ ಅವನು ತಾಳಮೇಳಗಳ ಕ್ರಮದ ಕಟ್ಟನ್ನು ಅನುಸರಿಸಲೇಬೇಕು. ಒಬ್ಬ ಮಹಾಕವಿಯು ತನ್ನ ಕಲ್ಪನಾಸಾಮ್ರಾಜ್ಯದ ಸುಂದರ ಸನ್ನಿವೇಶಗಳನ್ನು ವ್ಯಕ್ತಪಡಿಸುವಾಗ ಅವನು ಕಾವ್ಯ ಲಕ್ಷಣಗಳ ಕಟ್ಟನ್ನು ಅನುಸರಿಸಲೇಬೇಕು. ಇವು ಶಿಸ್ತಿನ ಉತ್ತಮ ನಿದರ್ಶನಗಳು. ಶಿಸ್ತುಪಾಲನೆಯು ಕಲಾವಿದರ ಕಲಾಕೌಶಲ್ಯಗಳ ಸ್ವತಂತ್ರ ವಾದ ಓಟಕ್ಕೆ ತಡೆಯನ್ನುಂಟುಮಾಡದೆ ಅದು ಸ್ವಾತಂತ್ರ್ಯದ ಅಂತಿಮ ಗುರಿ ಯನ್ನು ಸಾಧಿಸಲು ಸಹಾಯ ನೀಡುತ್ತದೆ. ಉಚ್ಚತಮ ಕಾರ್ಯದಲ್ಲಿ ಕಾರ್ಯಕರ್ತನು ತನ್ನ ಕಾರ್ಯವನ್ನು ತಾನೇ ಆಯ್ದುಕೊಳ್ಳುತ್ತಾನೆ; ಆ ಕಾರ್ಯದ ಜಯಾಪಜಯಗಳನ್ನು ಅಳೆಯುವ ಅಳತೆಗೋಲನ್ನು ತಾನೇ ನಿರ್ಧರಿಸುತ್ತಾನೆ; ಸ್ವಯಂ ನಿರ್ಮಾಪಕ ಕ್ರಿಯೆಗಳನ್ನು ಪ್ರಕಟಗೊಳಿಸಬಲ್ಲ ಅವಕಾಶವನ್ನು ತಾನೇ ಕಲ್ಪಿಸಿಕೊಳ್ಳುತ್ತಾನೆ. ಈ ಬಗೆಯ ಕಾರ್ಯ ಕ್ರೀಡೆ ಯಲ್ಲದೆ ಮತ್ತೇನು ?

## ೪. ಕ್ರೀಡೆ ಮತ್ತು ಕಲಾನಿರ್ಮಾಣ

ಕಲೆ ಮತ್ತು ಕ್ರೀಡೆಗಳ ನಡುವೆ ನಿಕಟವಾದ ಸಂಬಂಧವಿದೆ. ಕ್ರೀಡೆಯು ಸ್ವಯಂ ಪ್ರೇರಣೆಯಿಂದ ಹೊರಡುತ್ತದೆ. ಕಲೆಯೂ ಸಹ ಸ್ವಯಂಪ್ರೇರಣೆಯಿಂದ ಹೊರಟ ಒಂದು ಆನಂದದಾಯಕ ಕೃತಿ. ಕವಿಗಳು ತಮ್ಮ ಕಟು ಅನುಭವವನ್ನು ಸಹ ಕವನದ ರೂಪದಲ್ಲಿ ಪ್ರಕಟಪಡಿಸುತ್ತಾರೆ. ಅವರ ದುಃಖ ದುಮ್ಮಾನಗಳು ನಿರ್ಮಲ ನುಡಿಯಿಂದ ಹೊರಬೀಳುವಾಗ ಅವರು ಉತ್ಕಟ ಆನಂದವನ್ನು ಅನುಭವಿಸುತ್ತಾರೆಂದು ಹೇಳಬಹುದು. ಕ್ರೀಡೆಯು ಮುಂದುವರಿದು ಕಲೆಯಾಗಿ ಪರಿಣಮಿಸುತ್ತದೆ. ಒಬ್ಬ ಕ್ರಿಕೆಟ ಆಟಗಾರನ ನಿದರ್ಶನವನ್ನು ಇಲ್ಲಿ ತೆಗೆದುಕೊಳ್ಳಬಹುದು. ಕೇವಲ ಶಾರೀರಿಕ ಪರಿಶ್ರಮದಿಂದ ಅವನಿಗೆ ಆನಂದವುಂಟಾಗುವುದಿಲ್ಲ. ಕ್ರಿಕೆಟ ಆಟದ ಪರಂಪರೆಗೆ ಉಚಿತವಾದ ಶಿಸ್ತಿನ ಚಟುವಟಿಕೆಗಳಲ್ಲಿ ತಾನು ತೋರಿಸಬಲ್ಲ ಸಾಮರ್ಥ್ಯದಿಂದ ಅವನಿಗೆ ಆನಂದವುಂಟಾಗುತ್ತದೆ. ಶಿಲ್ಪಿ, ಕವಿ, ಸಂಗೀತ ಗಾರ, ಚಿತ್ರಗಾರ ಮೊದಲಾದವರು ತಮ್ಮ ದೈವಿಕ ಶಕ್ತಿಯನ್ನು ಸುಂದರ ವಾದ ಶೈಲಿಯಲ್ಲಿ ವ್ಯಕ್ತಪಡಿಸುವಾಗ ಅವರಿಗೆ ಮಹತ್ತರವಾದ ಆನಂದ ವುಂಟಾಗುತ್ತದೆ.

ಯಾವುದೊಂದು ಜನಾಂಗದ ಆಟಪಾಟಗಳ ಸ್ವಭಾವದ ಮೇಲಿಂದ ಅದರ ಕಲೆಯ ಬೆಲೆಯನ್ನು ನಿರ್ಧರಿಸಬಹುದು. ಆರೋಗ್ಯದಾಯಕವೂ, ದಯಾಪೂರಿತವೂ, ಸೌಂದರ್ಯಯುತವೂ ಆದ ಓಲಂಪಿಕ ಪಂದ್ಯಾಟಗಳಿಗಾಗಿ ಪ್ರಸಿದ್ಧಿಯನ್ನು ಪಡೆದ ಗ್ರೀಕ ಜನಾಂಗವು ಪರಮಸುಂದರ ಕಲಾ ಕೃತಿಗಳನ್ನು ನಿರ್ಮಾಣ ಮಾಡಿತು. ಕಾಡು ಪ್ರಾಣಿಗಳು ಗುಲಾಮರನ್ನು ಹರಿದು ತಿನ್ನುವ ಭಯಂಕರವಾದ ದೃಶ್ಯಗಳನ್ನು ನೋಡಿ ತಣಿಯುವ ರೋಮನ್ ಜನಾಂಗವು ಹೇಳಿಕೊಳ್ಳುವಂತಹ ಕಲಾಕೃತಿಗಳನ್ನು ನಿರ್ಮಾಣ ಮಾಡದೆ ಹೋಯಿತು. ಇದು ಒಂದು ಆಕಸ್ಮಿಕ ಸಂಗತಿಯಲ್ಲ. ರಥಗಳ ಮೇಲಾಟ ಮತ್ತು ಪಗಡಿಯಾಟಗಳಲ್ಲಿ ಆಸಕ್ತರಾದ ಆರ್ಯರು ಚಿರಕಾಲವೂ ಬಾಳಬಲ್ಲ ಗ್ರಂಥಗಳನ್ನು ರಚಿಸಿದ್ದಾರೆ. ಆದರೆ ಖಡ್ಗ-ಡಾಣಪಟ್ಟೆ ಮೊದಲಾದ ಯುದ್ಧಾಸಕ್ತ ಆಟಗಳಲ್ಲಿ ಪ್ರಸಿದ್ಧಿಯನ್ನು ಪಡೆದ ರಜಪೂತರು ಹೇಳಿಕೊಳ್ಳುವಂತಹ ಕಲಾಕೃತಿಗಳನ್ನು ರಚಿಸಿಲ್ಲ. ಈ ನಿದರ್ಶನಗಳು ಒಂದು ಆಳವಾದ ಸತ್ಯವನ್ನೇ ಸೂಚಿಸುತ್ತವೆ.

ಕೈಗಾರಿಕೆಯ ವಸ್ತುಗಳಲ್ಲಿ ಕಂಡುಬರುವ ಸೌಂದರ್ಯವೂ ಸಹ ಕ್ರೀಡಾತ್ಮಕ ಪ್ರವೃತ್ತಿಯಿಂದ ಹೊರಬೀಳುತ್ತದೆ. ಕಸಬುದಾರನು ಪೂರ್ಣ ಕೌಶಲ್ಯವನ್ನು ಪಡೆದ ಮೇಲೆ ಅವನು ತನ್ನ ವಸ್ತುಗಳ ನಿರ್ಮಾಣ ಕಾರ್ಯದಲ್ಲಿ ಆನಂದವನ್ನು ತೆಗೆದುಕೊಳ್ಳಹತ್ತುತ್ತಾನೆ. ಆಗ ಅವನ ಆನಂದವು ಸೌಂದರ್ಯದಲ್ಲಿ ಪರಿಣಮಿಸುತ್ತದೆ. ಇಲ್ಲಿ ಮಣ್ಣಿನ ಹೂಜಿಗಳನ್ನು ಮಾಡುವವನ ನಿದರ್ಶನವನ್ನು ತೆಗೆದುಕೊಳ್ಳಬಹುದು. ಹೂಜಿಗಳನ್ನು ಅವನು ಸುಲಭವಾಗಿ ಮಾಡಲು ಬಲ್ಲವನಾದಮೇಲೆ, ಅವನ ಕಾರ್ಯ ಒಂದು ಆಟವಾಗಿ ಪರಿಣಮಿಸುತ್ತದೆ. ಆಗ ಅವನು ತನ್ನ ಕಸಬುಗಾರಿಕೆಯ ಪರಂಪರೆಯ ಶೈಲಿಯನ್ನು ಅಳವಡಿಸಿಕೊಳ್ಳಹತ್ತುತ್ತಾನೆ. ಆ ಶೈಲಿಯು ಹಸ್ತಗತವಾಯಿತೆಂದರೆ ಅವನಿಗೆ ಹರ್ಷವಾಗುತ್ತದೆ. ಇಂತಹ ಹರ್ಷದಿಂದ ಹೊರಬೀಳುವ ಅವನ ಹೂಜಿಗಳು ಸುಂದರ ರೂಪ ಧಾರಣಮಾಡುತ್ತವೆ. ಈ ಸಂಗತಿಯು ಸೌಂದರ್ಯೋಪಾಸನೆಯ ಶಿಕ್ಷಣದಲ್ಲಿ ಮಾರ್ಗದರ್ಶಿಯಾಗಿದೆ.

ದೇವರು ಕೆಲ ಸುದೈವಿಗಳಿಗೆ ಮಾತ್ರ ಸೌಂದರ್ಯ ನಿರ್ಮಾಣಶಕ್ತಿಯನ್ನು ದಯಪಾಲಿಸಿಲ್ಲ. ಈ ಶಕ್ತಿಯು ಹೆಚ್ಚುಕಡಿಮೆ ಪ್ರಮಾಣದಲ್ಲಿ

ಎಲ್ಲರಲ್ಲಿಯೂ ಇರುತ್ತದೆ. ಗಣಿತ ಬಿಡಿಸಬಲ್ಲ ಜಾಣ್ಮೆಯಷ್ಟೇ ವಿಶಾಲವಾಗಿ ಕಲಾ ನಿರ್ಮಾಪಕ ಜಾಣ್ಮೆಯು ಸಹ ಮಾನವರಲ್ಲಿ ಹರಡಿದೆ. ಬಾಲ ಬಾಲಕಿಯರ ಶಕ್ತಿಗಳು ಸಹಜವಾಗಿ ಹರಿಯಲು ಉತ್ತೇಜನಕೊಡಬಲ್ಲ ಸ್ಥಿತಿಗತಿಗಳು ಶಾಲೆಯಲ್ಲಿ ನಿರ್ಮಾಣವಾಗಲಿ. ಸ್ವಾತಂತ್ರ್ಯಪೂರಿತ ಮತ್ತು ದಯಾಪೂರಿತ ಸಮಾಜವು ಬಾಲಕರಿಗಾಗಿ ಏರ್ಪಡಲಿ. ಬಾಲಕರು ಆನಂದದಾಯಕ ಕ್ರಿಯೆಗಳಲ್ಲಿ ತೊಡಗಲಿ. ಶಾಲೆಯ ಚಟುವಟಿಕೆಗಳು ಅವರಿಗೆ ಆಟವಾಗಿ ಪರಿಣಮಿಸಲಿ. ಆಗ ಅವರ ಸೌಂದರ್ಯ ನಿರ್ಮಾಪಕ ಶಕ್ತಿಯು ಅನಂತ ರೂಪಗಳಲ್ಲಿ ನಿಶ್ಚಯವಾಗಿ ಕಾಣಿಸಿಕೊಳ್ಳಬಲ್ಲದು.

## ೫. ಮೊಂಟೇಸೋರಿ ಶಿಕ್ಷಣ ಪದ್ಧತಿ

ಈ ವಿಚಾರಗಳು ಶಿಕ್ಷಣ ಪ್ರಪಂಚಕ್ಕೆ ಹೊಸವೇನೂ ಅಲ್ಲ. ಮೇರಿಯಾ ಮೊಂಟೇಸೋರಿಯವರ ಶಿಕ್ಷಣ ಸುಧಾರಣೆಯು ಜಗತ್ಪ್ರಸಿದ್ಧವಿದೆ. ಆಕೆಯ ಶಿಕ್ಷಣ ಪದ್ಧತಿಯಲ್ಲಿರುವ ಬಹು ಭಾಗವು ಅನುಭವದ ಕಿಚ್ಚಿನಲ್ಲಿ ಕರಗಿ ಹೋಗಬಹುದು. ಆದರೆ ಆಕೆಯ ಶಿಕ್ಷಣದ ಮೂಲ ತತ್ವವು ಮಾತ್ರ ಶಾಶ್ವತವಾಗಿ ಉಳಿಯಬಲ್ಲದು. "ಮಗುವು ತನ್ನ ಶಿಕ್ಷಣದ ಹೊಣೆಯನ್ನು ತಾನೇ ನಿರ್ವಹಿಸಲೇಬೇಕು." —ಎಂದು ಆಕೆಯು ಧೈರ್ಯವಾಗಿ ಹೇಳಿದ್ದಾಳೆ. ಸಣ್ಣಮಕ್ಕಳು ಮೂಲತಃ ಸಮಾಜ ಜೀವಿಗಳಿರುತ್ತಾರೆ. ಆದುದರಿಂದ, ಪರಸ್ಪರ ಇರುವುದನ್ನು, ಕ್ರೀಡೆ ಮತ್ತು ಕಾರ್ಯಗಳಲ್ಲಿ ಪರಸ್ಪರ ಸಹಕಾರದಿಂದ ನಡೆಯುವುದನ್ನು ತಾವಾಗಿಯೇ ಕಲಿತುಕೊಳ್ಳಬಲ್ಲರು. ಮೊಂಟೇಸೋರಿ ಪದ್ಧತಿಯ ಶಿಕ್ಷಣದ ಉಪಕರಣಗಳು ಹೊಸ ಬಗೆಯಾಗಿವೆ. ಆ ಉಪಕರಣಗಳ ಸಹಾಯದಿಂದ ಮಕ್ಕಳು ತಾವು ಕಲಿಯಬೇಕಾದುದನ್ನೆಲ್ಲ ತಾವಾಗಿಯೇ ಕಲಿತುಕೊಳ್ಳುತ್ತಾರೆ:— ಚಲನವಲನದಲ್ಲಿ ಕೌಶಲ್ಯವನ್ನು ಸಂಪಾದಿಸುತ್ತಾರೆ. ಇಂದ್ರಿಯಗಳಿಂದ ವಸ್ತುಗಳ ಗುಣಧರ್ಮಗಳನ್ನು ಗುರುತಿಸುವುದನ್ನು ಕಲಿಯುತ್ತಾರೆ. ಓದುಬರೆಹ—ಗಣಿತಗಳ ಮೊದಲ ಪಾಠಗಳನ್ನು ಕಲಿಯುತ್ತಾರೆ. ಮಕ್ಕಳ ಮೇಲ್ವಿಚಾರಣೆಗಾಗಿ ಒಬ್ಬ ನಿರ್ದೇಶಕನಿರುತ್ತಾನೆ. ಅವನು ಮಕ್ಕಳಮೇಲೆ ಬಾಹ್ಯ ನಿರ್ಬಂಧನೆಗಳನ್ನು ಹೇರುವುದಿಲ್ಲ. ಮಕ್ಕಳು ತಮ್ಮ ಅಭ್ಯಾಸದ ವೇಳೆಯನ್ನು ತಾವೇ ಗೊತ್ತುಮಾಡಿಕೊಳ್ಳುವರು. ತಮ್ಮ ಕಾರ್ಯವನ್ನು ತಾವೇ ಆಯ್ದುಕೊಳ್ಳು

ವರು. ಸ್ವಯಂಪ್ರೇರಣೆಯ ಪ್ರವೃತ್ತಿಯನ್ನು ಬಲಪಡಿಸಿಕೊಳ್ಳುವರು. ತಮ್ಮ ಕಾಲಮೇಲೆ ತಾವೇ ನಿಲ್ಲಲು ಕಲಿತುಕೊಳ್ಳುವರು; ಸ್ವಾಭಿಮಾನಿಗಳಾಗುವರು. ಇತರರ ಸಂಗಡ ಮರ್ಯಾದೆಯಿಂದ ವರ್ತಿಸಲು ಕಲಿಯುವರು. ಉದ್ಯೋಗ ತತ್ಪರರಾಗುವರು. ಇಂತಹ ಗುಣಗಳನ್ನು ಪರಂಪರಾಗತ ಶಿಕ್ಷಣ ಪದ್ಧತಿಯಲ್ಲಿ ತರಬೇತಾದ ಬಾಲಕರಲ್ಲಿ ಕಾಣುವುದು ಅಪರೂಪ. ಮೊಂಟೇಸೋರಿ ಪದ್ಧತಿಯ ಈ ಸಾಧ್ಯತೆಗಳ ಬಗ್ಗೆ ಸಂಶಯಪಡಬೇಕಾಗಿಲ್ಲ. ಹಳೆಯ ಪದ್ಧತಿಯ ಶಾಲೆಗಳಲ್ಲಿ ಬಾಲಕರು ವ್ಯಂಗ ಮನಸ್ಕರಾಗಿರುತ್ತಾರೆ; ಅಸ್ತವ್ಯಸ್ತ ಕ್ರಿಯೆಗಳಲ್ಲಿ ತೊಡಗಿರುತ್ತಾರೆ; ಎಡೆಬಿಡದೆ ಕಿರಿಚುತ್ತಿರುತ್ತಾರೆ. ಇಂತಹ ಶಾಲೆಯ ನಿರೀಕ್ಷಣೆಯನಂತರ ಸ್ವಾತಂತ್ರ್ಯವನ್ನು ಸದುಪಯೋಗಪಡಿಸಿಕೊಳ್ಳಲು ಕಲಿತ ಬಾಲಕರಿಂದ ತುಂಬಿದ ಶಾಲೆಗೆ ಹೋಗಿ ನೋಡಬೇಕು. ಅಲ್ಲಿ ಬಾಲಕರು ಪ್ರಶಾಂತವಾಗಿ ಸಂತಸದಿಂದ ಸ್ವಯಂಪ್ರೇರಿತ ಕ್ರಿಯೆಗಳಲ್ಲಿ ನಿರತರಾಗಿರುವುದನ್ನು ಕಾಣಬಹುದು. ಈ ಸ್ಥಿತ್ಯಂತರಗಳನ್ನು ನಿರೀಕ್ಷಿಸಿದವರಾರೂ ಹೊಸ ಪದ್ಧತಿಯ ಮೇಲ್ಮೆಯ ಬಗ್ಗೆ ಸಂಶಯಪಡಲಾರರು.

ಮೊಂಟೇಸೋರಿ ಪದ್ಧತಿಯು ಅನೇಕ ವಿಮರ್ಶೆಗಳನ್ನು ಎದುರಿಸಬೇಕಾಯಿತು. ಕೆಲವರು ಈ ಶಿಕ್ಷಣ ಪದ್ಧತಿಯಲ್ಲಿ ಅಡಕವಾದ ಸ್ವಾತಂತ್ರ್ಯದ ತತ್ವವನ್ನೇ ವಿರೋಧಿಸಿದರು. ಈ ವಿರೋಧವು ತಪ್ಪಾದುದೆಂದು ಬಹುಜನರು ಈಗಾಗಲೇ ಒಪ್ಪಿಕೊಂಡಿದ್ದಾರೆ. ಈ ಪದ್ಧತಿಯ ಶಿಕ್ಷಣದ ಉಪಕರಣಗಳ ಬಗ್ಗೆ ಹಲವು ವಿಮರ್ಶಕರು ಟೀಕೆ ಮಾಡಿದ್ದಾರೆ. "ಈ ಶಿಕ್ಷಣ ಪದ್ಧತಿಯಲ್ಲಿ ಕೇವಲ ಬೌದ್ಧಿಕ ವಿಷಯಗಳಿಗೆ ಸ್ಥಾನ ಕೊಡಲಾಗಿದೆ. ಸೌಂದರ್ಯದ ಅಭಿರುಚಿಯನ್ನು ಹುಟ್ಟಿಸುವ ವಿಷಯಗಳನ್ನು ಕಡೆಗಾಣಿಸಿದೆ. ಬಣ್ಣ ಆಕಾರ ಧ್ವನಿ ಮೊದಲಾದವುಗಳನ್ನು ಗುರುತಿಸುವ ಚಟುವಟಿಕೆಗಳು ಪ್ರತ್ಯೇಕಿಸಲ್ಪಟ್ಟಿವೆ. ಇದರಿಂದ ಮಾನಸಿಕ ಐಕ್ಯತೆಯನ್ನು ಒಡೆದು ಹಾಕುತ್ತವೆ. ಈ ಪದ್ಧತಿಯು ಮಾನಸಿಕ ಪ್ರಯೋಗಶಾಲೆಯ ವಾತಾವರಣವನ್ನು ಉಸಿರಾಡಿಸುತ್ತದೆ. ಕೊನೆಯದಾಗಿ, ಮಗುವಿಗೆ ಜಗತ್ತಿನ ವಾಸ್ತವಿಕ ಜ್ಞಾನವನ್ನು ಕೊಡಬಲ್ಲ ಭಾವನಾಪರ ಕ್ರೀಡೆಗೆ ಸ್ಥಾನವನ್ನು ಕೊಟ್ಟಿಲ್ಲ. ಗಂಧರ್ವ ಕಿನ್ನರರ ಅದ್ಭುತ ರಮ್ಯ ಕಥೆಗಳನ್ನು ಕಡೆಗಾಣಿಸಲಾಗಿದೆ."— ಎಂದು ವಿಮರ್ಶಕರು ಟೀಕಿಸಿದ್ದಾರೆ. ಈ ಟೀಕೆಗಳು ಕೆಲಮಟ್ಟಿಗೆ ಸಮಂಜಸ

ವಾಗಿವೆ. ಆದರೂ ಈ ಶಿಕ್ಷಣ ಪದ್ಧತಿಯು ಸಣ್ಣ ಮಕ್ಕಳ ಕ್ರೀಡೆಯ ತತ್ವದ ಮೇಲೆ ನಿರ್ಮಿತವಾಗಿದೆಯೆಂದು ಹೇಳಬಹುದು.

## ೬. ಸಂಶೋಧನಾತ್ಮಕ ಶಿಕ್ಷಣ ಪದ್ಧತಿ

ಸಂಶೋಧನಾತ್ಮಕ ಶಿಕ್ಷಣ ಪದ್ಧತಿಯೂ ಸಹ ಇಂತಹದೇ ಒಂದು ಶಿಕ್ಷಣ ಸುಧಾರಣೆಯಾಗಿದೆ. ಇದನ್ನು ಎಚ್. ಈ ಆರ್ಮಸ್ಟ್ರಾಂಗ ಎಂಬ ಆಂಗ್ಲ ಶಿಕ್ಷಕರು ಪ್ರಯೋಗದಲ್ಲಿ ತಂದರು. ಭೌತಿಕಶಾಸ್ತ್ರ ಮತ್ತು ರಸಾಯನ ಶಾಸ್ತ್ರ ಮೊದಲಾದ ವೈಜ್ಞಾನಿಕ ವಿಷಯಗಳನ್ನು ಕಲಿಸುವುದರಲ್ಲಿ ಅದು ಮೊದಮೊದಲು ಆಚರಣೆಯಲ್ಲಿ ತರಲ್ಪಟ್ಟಿತು. ಈಗ ಅದನ್ನು ಇತರ ವಿಷಯ ಗಳನ್ನು ಕಲಿಸುವುದರಲ್ಲಿ ಸಹ ಉಪಯೋಗಿಸುತ್ತಾರೆ. "ವಿದ್ಯಾರ್ಥಿಯನ್ನು ಮೂಲ ಸಂಶೋಧಕನ ಸ್ಥಾನವನ್ನು ಆಕ್ರಮಿಸುವಂತೆ ಮಾಡಬೇಕು. ಅವನು ತನ್ನ ಎದುರಿಗಿರುವ ಜ್ಞಾನದಾಯಕ ವಸ್ತುಗಳ ಮೇಲೆ ತನ್ನ ಬುದ್ಧಿಯನ್ನು ತೊಡಗಿಸಬೇಕು. ವಿಜ್ಞಾನಿಯಂತೆ ಅವನು ಸ್ವತಃ ಜ್ಞಾನಾರ್ಜನೆ ಮಾಡಿ ಕೊಳ್ಳಬೇಕು."— ಎಂದು ಆರ್ಮಸ್ಟ್ರಾಂಗರವರು ಹೇಳಿದ್ದಾರೆ. ಈ ಮಾತಿ ನಲ್ಲಿಯೂ ಕ್ರೀಡೆಯ ತತ್ವವು ನಿಚ್ಚಳವಾಗಿ ಅಳವಡಿಸಿದೆ. ಈಚೆಗೆ ಶಾಲೆಯ ಅಭ್ಯಾಸಪತ್ರಿಕೆಯು ಬೆಳೆದಿದೆ. ಆದುದರಿಂದ, ಈ ಪದ್ಧತಿಯು ಅವ್ಯವ ಹಾರ್ಯವೆನಿಸಹತ್ತಿದೆ. ಆದರೆ ಇದರ ಆಂತರಿಕ ತತ್ವವನ್ನು ಮರೆತರೆ ಶಿಕ್ಷಣವು ಬಡವಾಗುವುದರಲ್ಲಿ ಸಂಶಯವಿಲ್ಲ. ಸೃಷ್ಟಿವಸ್ತು ಪರಿಚಯ ಮಾಡಿಸಿಕೊಡುವಲ್ಲಿ, ತೋಟಗಾರಿಕೆಯನ್ನು ಕಲಿಸುವಲ್ಲಿ, ಭೂಗೋಲದ ಪಾಠಗಳನ್ನು ಹೇಳಿಕೊಡುವಲ್ಲಿ, ಇತಿಹಾಸದ ವಿವಾದಾತ್ಮಕ ಸಂಗತಿಗಳನ್ನು ವಿವೇಚಿಸುವಲ್ಲಿ, ನಕ್ಷತ್ರಗಳ ನಿರೀಕ್ಷಣೆಯಲ್ಲಿ ಈ ಸಂಶೋಧಾತ್ಮಕ ಶಿಕ್ಷಣ ಪದ್ಧತಿಯು ಅತ್ಯಂತ ವ್ಯವಹಾರ್ಯವಾಗಿದೆ.

## ೭. ಡಾಲ್ಟನ್ ಶಿಕ್ಷಣ ಪದ್ಧತಿ

ಹೆಲೆನ್ ಪಾರ್ಕ ಹರ್ಸ್ಟರವರು ಪ್ರಸಿದ್ಧಿಗೆ ತಂದ ಡಾಲ್ಟನ್ ಯೋಜ ನೆಯು ಇನ್ನೊಂದು ಮಹತ್ವದ ಶಿಕ್ಷಣ ಸುಧಾರಣೆಯಾಗಿದೆ. ಆಕೆಯು ಅಭ್ಯಾಸ ಪತ್ರಿಕೆಯಲ್ಲಿ ಬದಲಾವಣೆ ಮಾಡಲು ಇಚ್ಛಿಸುವುದಿಲ್ಲ: "ಸಾಧ್ಯ ವಿರುವಮಟ್ಟಿಗೆ ವರ್ಗದೊಳಗೆ ಕಲಿಸುವುದನ್ನು ಬಿಡಬೇಕು. ವೇಳಾಪತ್ರಿ

ಕೆಯ ನಿರ್ಬಂಧನೆಗಳನ್ನು ತೆಗೆದುಹಾಕಬೇಕು. ವಿದ್ಯಾರ್ಥಿಗಳು ವೈಯಕ್ತಿಕ ವಾಗಿ ಇಲ್ಲವೆ ಗುಂಪುಗೂಡಿ ತಮ್ಮ ಅಭ್ಯಾಸವನ್ನು ತಾವೇ ಮಾಡಲು ಸ್ವಾತಂತ್ರ್ಯತೆ ಇರಬೇಕು. ಅವರು ತಮ್ಮ ತಮ್ಮ ಯೋಗ್ಯತೆಯ ಪ್ರಕಾರ ಅಭ್ಯಾಸವನ್ನು ಮುಂದುವರಿಸಬೇಕು. ತಮಗೆ ಬೇಕಾದಾಗ ಶಿಕ್ಷಕರಿಂದ ಮಾರ್ಗದರ್ಶನ ಪಡೆಯಲು ಅವರಿಗೆ ಅವಕಾಶವಿರಬೇಕು. ಬಾಲಕನು ಮಾಡಿ ಮುಗಿಸಬೇಕಾದ ಅಭ್ಯಾಸದ ಬಗ್ಗೆ ಶಿಕ್ಷಕನ ಸಂಗಡ ಒಡಂಬಡಿಕೆಯನ್ನು ಮಾಡಿಕೊಳ್ಳಬೇಕು. ಅದನ್ನು ಅವನು ಒಂದು ನಿಶ್ಚಿತ ಸಮಯದಲ್ಲಿ ಪೂರ್ತಿಗೊಳಿಸಬೇಕು. ಅಭ್ಯಾಸದ ಒಡಂಬಡಿಕೆಯನ್ನು ಮಾಡಿ ಮುಗಿಸಲು ಸಹಾಯಕವಾಗಬಲ್ಲ ಎಲ್ಲ ವಿವರಗಳನ್ನು ಶಿಕ್ಷಕನು ಒದಗಿಸಬೇಕು. ಸಾಮಾನ್ಯ ವರ್ಗಗಳ ಬದಲಾಗಿ ಬೇರೆ ಬೇರೆ ವಿಷಯಗಳ ಪ್ರಯೋಗ ಶಾಲೆಗಳಿರಬೇಕು. ಬೇರೆ ಬೇರೆ ವಿಷಯಗಳನ್ನು ಅಭ್ಯಸಿಸಲು ಬಯಸುವ ವಿದ್ಯಾರ್ಥಿಗಳು ಆಯಾ ಪ್ರಯೋಗಶಾಲೆಗಳಲ್ಲಿ ಹೋಗಿ ಅಭ್ಯಸಿಸಲು ಸ್ವಾತಂತ್ರ್ಯತೆಯಿರಬೇಕು. ಆದರೂ ಯಾವುದೊಂದು ವಿಷಯದ ವಿಶಿಷ್ಟ ಗುಣವು ವರ್ಗ ಶಿಕ್ಷಣದ ಅವಶ್ಯಕತೆಯನ್ನು ತೋರಿಸಿಕೊಟ್ಟರೆ, ಆಗ ಶಿಕ್ಷಕನು ವಿದ್ಯಾರ್ಥಿಗಳನ್ನು ಸಾಮೂಹಿಕ ಪಾಠದ ಸಲುವಾಗಿ ಒಂದುಗೂಡಿಸಬೇಕು"— ಎಂದು ಮೊದಲಾಗಿ ಹೆಲೆನ್ ಪಾರ್ಕ ಹರ್ಸ್ಟರವರು ಹೇಳಿದ್ದಾರೆ. ಒಂದು ದೊಡ್ಡ ಶಾಲೆಯಲ್ಲಿ ಈ ಯೋಜನೆಯಿಂದ ಅನೇಕ ಅಡಚಣಿಗಳು ಉಂಟಾಗುತ್ತವೆ. ಆದುದರಿಂದ ಈ ಯೋಜನೆಯನ್ನು ಉತ್ಸಾಹದಿಂದ ಕೈಕೊಂಡ ಬಹಳ ಶಾಲೆಗಳು ಈಗಾಗಲೇ ಅರ್ಧಮರ್ಧ ಬಿಟ್ಟುಕೊಟ್ಟಿವೆ. ಹಲಕೆಲವು ದೊಡ್ಡ ಶಾಲೆಗಳು ಅಲ್ಪಸ್ವಲ್ಪ ಬದಲಾವಣೆ ಮಾಡಿಕೊಂಡು ಈ ಯೋಜನೆಯನ್ನು ಅನುಸರಿಸುತ್ತಿರುತ್ತವೆ. ಅನೇಕ ಶಾಲೆಗಳಲ್ಲಿ ವರ್ಗ ಶಿಕ್ಷಣಕ್ಕಿಂತಲೂ ವೈಯಕ್ತಿಕ ಕಾರ್ಯತತ್ಪರತೆಗೆ ಇಂದು ಹೆಚ್ಚು ಮಹತ್ವವನ್ನು ಕೊಡಲಾಗುತ್ತದೆ. ಇದು ಡಾಲ್ಟನ್ ಯೋಜನೆಯ ಪರಿಣಾಮ.

## ೮. ಶಾಲೆಯ ಲೋಕಸತ್ತಾತ್ಮಕ ಆಡಳಿತೆ

ಮೇಲೆ ವಿವರಿಸಿದ ಅಭ್ಯಾಸಕ್ರಮ ಮತ್ತು ಶಿಕ್ಷಣವಿಧಾನಗಳ ಜೊತೆಗೆ ಶಾಲೆಯ ಆಡಳಿತೆಗೆ ಸಂಬಂಧಿಸಿದ ಸುಧಾರಣೆಗಳನ್ನೂ ಸಹಿತ ಸೇರಿಸಬೇಕು. ಅವುಗಳಲ್ಲಿ ಹೋಮರಲೇನ ಎಂಬವರ ಸುಧಾರಣೆಯು ಬಹಳ ಪ್ರಸಿದ್ಧವಿದೆ

ಒಬ್ಬ ಬುದ್ಧಿವಂತ ನ್ಯಾಯಾಧೀಶರು ಅಪರಾಧವನ್ನೆಸಗಿದ ೧೪ ವರ್ಷ ಮೇಲ್ಪಟ್ಟ ಬಾಲಕ ಬಾಲಕಿಯರನ್ನು ಹೋಮರ ಲೇನ ಇವರ ವಶಕ್ಕೆ ಕೊಟ್ಟರು. ಹೋಮರ ಲೇನರು ಒಂದು ಬಾಲಕ ಬಾಲಿಕೆಯರ ತುರಂಗದ ವ್ಯವಸ್ಥಾಪಕರಾಗಿದ್ದರು. ಆ ತುರಂಗವು ಒಂದು ಫಾರ್ಮದ ಮಧ್ಯದಲ್ಲಿರುವ ಮನೆಯಲ್ಲಿತ್ತು. ಅದು ಹೋಮರ ಲೇನರ ಪುಟ್ಟ ಲೋಕಸತ್ತಾತ್ಮಕ ರಾಜ್ಯವೆಂಬ ಹೆಸರಿನಿಂದ ಪ್ರಸಿದ್ಧವಾಗಿತ್ತು. ದುಷ್ಟ ಪ್ರವೃತ್ತಿಗಳ ಸೆಳೆತದಲ್ಲಿ ಸಿಲುಕಿದ ಬಾಲಕರು ಈ ಪುಟ್ಟ ರಾಜ್ಯದ ಮೊದಲ ನಾಗರಿಕರಾದರು. ಇವರ ಜೊತೆಗೆ ಹೋಮರ ಲೇನರು ಉತ್ತಮ ಗುಣದ ಸಣ್ಣ ಮಕ್ಕಳನ್ನು ಸೇರಿಸಿದರು. ಇದರಿಂದ ನಿರೀಕ್ಷಿಸಿದಂತೆ ಒಳ್ಳೆಯ ಪರಿಣಾಮವುಂಟಾಯಿತು. ಈ ಸಂಸ್ಥೆಗೆ ಸೇರ್ಪಡೆಯಾದ ಹೊಸ ಅಪರಾಧಿಗೆ ಅಲ್ಲಿಯ ಸ್ಥಿತಿಗತಿಗಳನ್ನು ಕಂಡು ಅತ್ಯಂತ ಆಶ್ಚರ್ಯವಾಗುತ್ತಿದ್ದಿತು. ಅಲ್ಲಿಯ ಆಡಳಿತೆಯು ಎಲ್ಲರ ಸಮ್ಮತಿಯಿಂದ ನಡೆಸಲ್ಪಡುತ್ತಿತ್ತು. ಅಲ್ಲಿಯ ಶಿಸ್ತನ್ನು ಎಲ್ಲರೂ ಸ್ವಯಂ ಪ್ರೇರಣೆಯಿಂದ ಪಾಲಿಸುತ್ತಿದ್ದರು. ಪರಸ್ಪರ ಸಹಕಾರದಿಂದಲೂ, ಸಂಪೂರ್ಣ ಸ್ವಾತಂತ್ರ್ಯದಿಂದಲೂ, ಹೊಣೆಗಾರಿಕೆಯಿಂದಲೂ ಅಲ್ಲಿಯ ಬಾಲಕರು ತಮ್ಮ ಕಾರ್ಯಭಾರಗಳನ್ನು ಸಾಗಿಸಿಕೊಂಡು ಹೋಗುತ್ತಿದ್ದರು. ನಡತೆ–ಸುಧಾರಕ ತುರಂಗಗಳಲ್ಲಿ ಈ ಮೊದಲು ರೂಢವಾಗಿದ್ದ ಪದ್ಧತಿಯನ್ನು ಇಲ್ಲಿ ತಿರುವು ಮುರುವು ಮಾಡಲಾಗಿತ್ತು. ಇದರ ಕಾರಣವು ನಿಚ್ಚಳವಾಗಿದೆ. ಹುಟ್ಟು ಗುಣದ ದೋಷದಿಂದ ಬಾಲಕರಲ್ಲಿ ದುಷ್ಟ ಪ್ರವೃತ್ತಿಗಳು ಬಹುಶಃ ಹುಟ್ಟುವು ದಿಲ್ಲ. ಬಾಲ್ಯದಲ್ಲಿ ಅವರ ಉತ್ಕಟವಾದ ಇಚ್ಛೆಗಳು ಹತ್ತಿಕ್ಕಲ್ಪಟ್ಟಿರುತ್ತವೆ. ಅವು ಮಾನಸಿಕ ಅಜಾಗೃತಾವಸ್ಥೆಯ ಒಳಪದರುಗಳಲ್ಲಿ ಹುದುಗಿಕೊಳ್ಳುತ್ತವೆ. ಮುಂದೆ ಅವು ಬಾಲಕರನ್ನು ಸಲ್ಲದ ಮಾರ್ಗಕ್ಕೆ ಹಚ್ಚಿಸುತ್ತವೆ. ಹತ್ತಿಕ್ಕ ಲ್ಪಟ್ಟ ಇಚ್ಛೆಗಳಿಂದ ತುಂಬಿದ ಅಜಾಗೃತ ಮನಸ್ಸಿನ ಗುಪ್ತ ಪ್ರೇರಣೆಯಿಂದ ಬಾಲಕರು ಅವ್ಯವಸ್ಥಿತವಾದ ಅಪಾಯಕಾರಕ ನಡತೆಯಲ್ಲಿ ತೃಪ್ತಿ ಪಡೆಯ ಹತ್ತುತ್ತಾರೆ. ಇಂತಹ ಬಾಲಕರನ್ನು ಸುಧಾರಿಸಲು ಅವರ ಮೇಲೆ ಹೆಚ್ಚು ನಿರ್ಬಂಧನೆಗಳನ್ನು ಹೇರುವುದು ನಿರುಪಯುಕ್ತ. ಏಕೆಂದರೆ, ನಿರ್ಬಂಧನೆ ಗಳಿಂದಲೇ ಅವರ ಮನಸ್ಸು ಕಲುಷಿತವಾಗಿರುತ್ತದೆ. ಆದುದರಿಂದ ಅವರ ಪ್ರವೃತ್ತಿಗಳನ್ನು ಪವಿತ್ರಗೊಳಿಸುವುದೊಂದೇ ಉತ್ತಮ ಮಾರ್ಗ. ಹೋಮರ ಲೇನರ ಕೈಯೊಳಗೆ ಬಂದ ಬಾಲಕರು ಕಿಡಿಗೇಡಿಗಳೆಂದು ಹೆಸರುವಾಸಿ

ಯಾಗಿದ್ದರು. ಅವರ ನಡತೆಯು ಸುಧಾರಿಸಲು ಅಶಕ್ಯವೆಂಬಂತೆ ತೋರು ತ್ತಿತ್ತು. ಇಂಥವರು ಸ್ವಯಂಪ್ರೇರಣೆಗೆ ಪೂರ್ಣ ಅವಕಾಶ ಕೊಡಬಲ್ಲ ಉದ್ಯೋಗಗಳಲ್ಲಿ ನಿರತರಾದ ಬಾಲಕರ ಮಧ್ಯೆ ಸಿಕ್ಕುಬೀಳುತ್ತಿದ್ದರು. ಅವರ ಶ್ರಮದಲ್ಲಿ ಸಮಭಾಗಿಯಾಗಲು ಇಚ್ಛಿಸಿದರೆ ಸ್ವಾತಂತ್ರ್ಯದ ಪ್ರತಿಫಲ ಆ ಬಾಲಕ ಅಪರಾಧಿಗಳಿಗೆ ದೊರೆಯುತ್ತಿತ್ತು. ಕೆಲಸ ಮಾಡಲು ಒಪ್ಪದಿದ್ದರೆ ತಮ್ಮ ಸರಿವಯಸ್ಸಿನ ಇತರ ಬಾಲಕರ ಕಡೆಯಿಂದ ತಿರಿದುಂಡು ಅವರು ಜೀವಿಸಬೇಕಾಗುತ್ತಿತ್ತು. ಸರಿವಯಸ್ಕ ಬಾಲಕರ ಸಹಜ ತಿರಸ್ಕಾರಕ್ಕೆ ತುತ್ತಾಗಬೇಕಾಗುತ್ತಿತ್ತು. ಈ ಶಿಸ್ತಿನ ವಿರುದ್ಧ ಹೋಗುವುದರಲ್ಲಿ ಯಾವ ಮನೋರಂಜನೆಯೂ ಇರಲಿಲ್ಲ. ಬಾಲಕ ಬಾಲಕಿಯರ ಸಾಮೂಹಿಕ ಒಪ್ಪಿಗೆ ಯಿಂದ ಉಂಟಾದ ಆಧಿಪತ್ಯದ ಹೊರತಾಗಿ ಬೇರಾವ ಆಧಿಪತ್ಯವೂ ಅಲ್ಲಿ ಇರಲಿಲ್ಲ. ಇಂತಹ ವಾತಾವರಣದಲ್ಲಿ ಸಿಕ್ಕುಬಿದ್ದ ಎಂತಹ ದುಷ್ಟ ಬಾಲಕನೂ ಸಹ ಕೆಲವೇ ದಿನಗಳಲ್ಲಿಯೇ ಪರಿಶ್ರಮಿಸುವ ಒಕ್ಕಲಿಗನಾಗುತ್ತಿದ್ದನು. ಬಾಲ್ಯದ ಕಿಡಿಗೇಡಿಯು ಸಮಾಜ ವ್ಯವಸ್ಥೆಯ ಪುರಸ್ಕರ್ತನಾಗಿ ಪರಿಣಮಿಸು ತ್ತಿದ್ದುದರಲ್ಲಿ ಅಚ್ಚರಿಯೇನಿದೆ ?

## ೯. ಶೈಕ್ಷಣಿಕ ಕ್ರಾಂತಿಯ ತಿರುಳು

ಮೊಂಟೆಸೋರಿ, ಪಾರ್ಕ್‌ಹರ್ಸ್ಟ್, ಲೇನ ಮೊದಲಾದವರ ವಿಚಾರ ಗಳು ಶಿಕ್ಷಣರಂಗದಲ್ಲಿ ಕ್ರಾಂತಿಯನ್ನುಂಟುಮಾಡಿವೆ. ಆ ವಿಚಾರಗಳನ್ನು ಇಲ್ಲಿ ಒಂದುಗೂಡಿಸುವ ಅಗತ್ಯವಿದೆ:— ತಂದೆ-ತಾಯಿಗಳ ಮತ್ತು ಶಿಕ್ಷಕರ ಸರ್ವಾಧಿಕಾರಿತ್ವದ ಧೋರಣೆ ಬದಲಾಗಬೇಕು. ಶಾಲೆಯಲ್ಲಿ ಅಭ್ಯಾಸ ಮತ್ತು ನಡತೆಗಳನ್ನು ಕಲಿತುಕೊಳ್ಳುವ ಹೊಣೆಯನ್ನು ಬಾಲಕರಮೇಲೆ ಹಾಕಬೇಕು. ವಿದ್ಯಾರ್ಥಿಗಳ ವೈಯಕ್ತಿಕ ಅವಶ್ಯಕತೆಗಳಿಗೆ ಸಹಾಯಕ ವಾಗುವಂತೆ ಶೈಕ್ಷಣಿಕ ವಿಧಾನಗಳನ್ನು ಹೊಂದಿಸಿಕೊಳ್ಳಬೇಕು. ಕ್ರೀಡೆಯಲ್ಲಿ ಕಂಡುಬರುವ ಸ್ವಯಂಪ್ರೇರಣೆಯ ಪ್ರವೃತ್ತಿಯನ್ನು ಬಾಲಕನ ವ್ಯಕ್ತಿತ್ವ ವಿಕಾಸಕ್ಕಾಗಿ ಈಗಿನಕ್ಕಿಂತಲೂ ಹೆಚ್ಚಾಗಿ ಬಳಸಿಕೊಳ್ಳಬೇಕು. ಬಾಲಕರ ಲ್ಲಿಯ ನಿರ್ಮಾಪಕ ಶಕ್ತಿಗಳನ್ನು ವೃದ್ಧಿಗೊಳಿಸಬೇಕು. ಶಾಲೆಯ ಕಾರ್ಯ ರಂಗಗಳನ್ನು ಆದಷ್ಟು ಬಾಹ್ಯ ಜಗದ ಜೀವನಕ್ಕೆ ಹೋಲುವಂತೆ ರಚಿಸ ಬೇಕು. ಈ ವಿಚಾರಗಳೇ ಶೈಕ್ಷಣಿಕ ಸುಧಾರಣೆಗಳ ತಿರುಳು.

## ೧೦. ವರ್ಗಶಿಕ್ಷಣ ಮತ್ತು ವೇಳಾಪತ್ರಿಕೆ

ಕ್ರೀಡಾತ್ಮಕ ಶಿಕ್ಷಣ ಪದ್ಧತಿಯಲ್ಲಿ ವರ್ಗಶಿಕ್ಷಣ ಮತ್ತು ವೇಳಾಪತ್ರಿಕೆಗಳಿಗೆ ಎಡೆಯಿಲ್ಲ. ಅವು ಸ್ವಾತಂತ್ರ್ಯ ವಿರೋಧಿ ತತ್ವಗಳನ್ನು ಅವಲಂಬಿಸಿವೆ: "ಶಾಲೆಯಲ್ಲಿ ಅನೇಕ ವರ್ಗಗಳನ್ನು ಮಾಡಿ ಒಂದೊಂದು ವರ್ಗದ ಬಾಲಕ ವೃಂದಕ್ಕೆ ಒಂದೇ ಬಗೆಯ ಪಾಠಗಳನ್ನು ಹೇಳಿಕೊಡಬಹುದು. ಒಂದು ವರ್ಗದೊಳಗಿನ ಬಾಲಕರನ್ನು ಒಂದೇ ಗತಿಯಿಂದ ಅಭ್ಯಾಸದ ಸೋಪಾನಗಳನ್ನು ಏರುವಂತೆ ಮಾಡಬಹುದು. ಒಂದೇಬಗೆಯ ಅಭ್ಯಾಸ ಪತ್ರಿಕೆಯನ್ನು - ಎಲ್ಲರಿಗೂ ಅನ್ವಯಿಸಬಹುದು. ಅಭ್ಯಾಸಪತ್ರಿಕೆಯ ವಿಷಯಗಳನ್ನು ಬೇರ್ಪಡಿಸಬಹುದು."— ಎಂಬ ನಂಬುಗೆಗಳು ವರ್ಗಶಿಕ್ಷಣ ಮತ್ತು ವೇಳಾಪತ್ರಿಕೆಗಳ ಹಿನ್ನೆಲೆಯಲ್ಲಿವೆ. ವರ್ಗಶಿಕ್ಷಣವೇ ಪ್ರಾಧಾನ್ಯವಾಗಿಪ್ಪ ಅನೇಕ ಶಾಲೆಗಳು ಇಂದು ಅಸ್ತಿತ್ವದಲ್ಲಿವೆ. ಕೆಲವೆಡೆ ವರ್ಗವನ್ನೂ ಸಹ ಒಡೆದು ಹಾಕಿ ಸಣ್ಣ ಸಣ್ಣ ಗುಂಪುಗಳನ್ನು ಮಾಡಲಾಗುತ್ತದೆ. ಬಾಲಕರು ಕಲಿಯುವ ವಿಷಯಗಳಲ್ಲಿ ಕೆಲವು ಐಚ್ಛಿಕ ವಿಷಯಗಳನ್ನು ಬೆರೆಸಲಾಗುತ್ತದೆ. ಕೆಲಮಟ್ಟಿಗೆ ವೈಯಕ್ತಿಕ ಕಾಳಜಿಯನ್ನು ಸಹ ತೆಗೆದುಕೊಳ್ಳಲಾಗುತ್ತದೆ. ಇದರಿಂದ ವರ್ಗಶಿಕ್ಷಣದ ಕಾಠಿಣ್ಯವು ಕಡಿಮೆಯಾಗುತ್ತದೆ. ಆದಾಗ್ಯೂ, "ಯಾವುದನ್ನು ಕಲಿಯಬೇಕು? ಹೇಗೆ ಕಲಿಯಬೇಕು? ಮತ್ತು ಯಾವ ಸಮಯದಲ್ಲಿ ಕಲಿಯಬೇಕು? ಎಂಬುದನ್ನು ಶಿಕ್ಷಕನು ಹೇಳುವನು; ಈ ರೀತಿ ಹೇಳುದುದನ್ನು ಬಾಲಕರು ಕಲಿಯಬೇಕು" — ಎಂಬ ವಿಚಾರವು ವರ್ಗ ಶಿಕ್ಷಣದ ಮೂಲ ಗ್ರಹಿಕೆಯಾಗಿದೆ. ಕ್ರೀಡಾತ್ಮಕ ಶಿಕ್ಷಣವು ಇದಕ್ಕೆ ವಿರೋಧವಾದ ತತ್ವದಮೇಲೆ ನಿಂತಿದೆ. ಕಲಿಯುವವನು ಬಾಲಕನು. ವರ್ಗವು ಕಲಿಯುವುದಿಲ್ಲ. ಆದಕಾರಣ ಮಗುವಿಗೆ ಶಿಕ್ಷಣ ಕೊಡಬೇಕಲ್ಲದೆ ಒಂದು ವರ್ಗಕ್ಕಲ್ಲ. ಕಲಿಯುವ ಮುಖ್ಯ ಹೊಣೆ ಮಗುವಿನ ಮೇಲಿದೆ. ಶಿಕ್ಷಕನು ಕೇವಲ ಮಾರ್ಗದರ್ಶಿ. ಈ ಮಾತು ವರ್ಗ ಶಿಕ್ಷಣ ಪದ್ಧತಿಯ ತತ್ವಕ್ಕೆ ವಿರೋಧವಾಗಿದೆ.

ಹಾಗಾದರೆ ವರ್ಗವನ್ನು ತೆಗೆದುಹಾಕಬೇಕೋ?— ವರ್ಗವನ್ನು ತೆಗೆದು ಹಾಕುವುದು ಸಾಧ್ಯವೋ ?— ಎಂಬ ಸಮಸ್ಯೆಯ ಬಗ್ಗೆ ಅತ್ಯಂತ ಅನುಭವಿಕ ಶಿಕ್ಷಕರು ವಿಚಾರಮಾಡಿದ್ದಾರೆ. ಅವರು ವರ್ಗವನ್ನು ಸಂಪೂರ್ಣವಾಗಿ ತೆಗೆದುಹಾಕುವುದು ಸಾಧ್ಯವಿಲ್ಲೆಂದು ಹೇಳಿದ್ದಾರೆ. ಇಷ್ಟೇ ಅಲ್ಲ, ಅದರ

ಅವಶ್ಯಕತೆಯನ್ನು ಸಹ ಒಪ್ಪಿಕೊಂಡಿದ್ದಾರೆ. ಬಾಲಕನು ಸಮಾಜದಲ್ಲಿ ಇರಬಯಸುತ್ತಾನೆ. ಶಾಲೆಯು ಒಂದು ಪುಟ್ಟ ಸಮಾಜ. ಆದುದರಿಂದ, ಎಲ್ಲರಿಗೂ ಅನ್ವಯಿಸುವ ವೇಳಾಪತ್ರಿಕೆ ಮತ್ತು ಎಲ್ಲರೂ ಕೂಡಿ ಮಾಡಬೇಕಾದ ಕಾರ್ಯಗಳಿರಲೇಬೇಕು. ಆದರೆ ಇವಕ್ಕಿಂತಲೂ ಕಟ್ಟುನಿಟ್ಟಾದ ವೇಳಾಪತ್ರಿಕೆಯಾಗಲಿ ಇಲ್ಲವೆ ವರ್ಗಗಳಾಗಲಿ ಬೇಕಾಗುವುದಿಲ್ಲ. ಒಂದು ನಿಯಮಿತ ವೇಳೆಯಲ್ಲಿ ಸಣ್ಣಮಕ್ಕಳು ಶಾಲೆಯಲ್ಲಿರಬೇಕು. ಆಗ ಅವರು ತಮ್ಮ ಇಚ್ಛೆಗೆ ಬಂದಂತೆ ಅಭ್ಯಾಸಮಾಡಲು ಅವಕಾಶವಿರಬೇಕು. ದೊಡ್ಡ ಹುಡುಗರಿಗೆ ಇದಕ್ಕಿಂತಲೂ ಸ್ವಲ್ಪ ಹೆಚ್ಚಿನ ವೇಳಾಪತ್ರಿಕೆಯು ಬೇಕಾಗಬಹುದು. ಇಡೀ ವರ್ಗದ ಬಾಲಕವೃಂದಕ್ಕೆ ಕೊಡಬೇಕಾದಂತಹ ಪಾಠವೂ ಇರಬಹುದು. ಸೌಂದರ್ಯೋಪಾಸಕ ಪಾಠಗಳನ್ನು ದೊಡ್ಡ ಗುಂಪಿಗೆ ಹೇಳಿದಾಗ ಅವು ಹೆಚ್ಚು ಪರಿಣಾಮಕಾರಿಯಾಗುತ್ತವೆ. ಇದಲ್ಲದೆ ಸಂಗೀತ, ತೋಟಗಾರಿಕೆ, ಕೈಕೆಲಸ, ಕವಾಯತು ಮತ್ತು ನಾಟ್ಯ ಪ್ರದರ್ಶನ ಮೊದಲಾದ ಕ್ರಿಯೆಗಳನ್ನು ಬಹಳ ವಿದ್ಯಾರ್ಥಿಗಳು ಕೂಡಿ ಮಾಡಬೇಕಾಗುವುದು. ಇವುಗಳಿಗಾಗಿ ನಿಶ್ಚಿತ ವೇಳೆ, ಸ್ಥಾನ, ಸಂಘಟನೆಗಳು ಅವಶ್ಯ—ಆದರೆ ಈ ಬಗೆಯ ವರ್ಗ ಮತ್ತು ವೇಳಾಪತ್ರಿಕೆಗಳಿಗೂ ಹಿಂದಿನ ಕಾಲದ ಕಟ್ಟುನಿಟ್ಟಾದ ವರ್ಗ ಮತ್ತು ವೇಳಾಪತ್ರಿಕೆಗಳಿಗೂ ನಡುವೆ ಮಹದಂತರವಿದೆ.

## ೧೧. ಸ್ವಾವಲಂಬಿ ನಾಗರಿಕನ ನಿರ್ಮಾಣ

ಇಂದಿನ ಕ್ರೀಡಾತ್ಮಕ ಶಿಕ್ಷಣವು ಹಿಂದಿನಕಾಲದ ಸರ್ವಾಧಿಕಾರಿತ್ವದ ಶಿಕ್ಷಣಕ್ಕಿಂತಲೂ ಹೆಚ್ಚು ಉತ್ತಮವಾದ ನಾಗರಿಕರನ್ನು ನಿರ್ಮಾಣ ಮಾಡುತ್ತಿದೆ. ಇದಕ್ಕೆ ಬಾಲಕರ ಇಚ್ಛಾ ಶಕ್ತಿಯ ಅಭಿವೃದ್ಧಿಯೇ ಕಾರಣ. ಕೆಲವರು ಇಚ್ಛಾಶಕ್ತಿಯನ್ನು ಮನುಷ್ಯನ ಒಂದು ಪ್ರತ್ಯೇಕ ಗುಣವೆಂದು ಭಾವಿಸಿದ್ದಾರೆ. ಈ ಭಾವನೆ ತಪ್ಪು. ಏಕೆಂದರೆ, ಇದು ಇಚ್ಛಾಶಕ್ತಿಯನ್ನು ಮನುಷ್ಯನ ಇತರ ಮಾನಸಿಕ ಶಕ್ತಿಯಿಂದ ಬೇರ್ಪಡಿಸುತ್ತದೆ. ನಿಜವಾಗಿ ನೋಡಿದರೆ, ಮಾನಸಿಕ ಶಕ್ತಿಯಲ್ಲಿ ಐಕ್ಯತೆಯಿದೆ. ಒಮ್ಮೆ ನಾನು ಒಂದು ಹುಲ್ಲುಕಡ್ಡಿಯನ್ನು ಕೈಯಲ್ಲಿ ತೆಗೆದುಕೊಳ್ಳುತ್ತೇನೆ; ಇನ್ನೊಂದು ಸಲ ಒಂದು ಮಹತ್ಕಾರ್ಯವನ್ನು ಸಾಧಿಸುತ್ತೇನೆ. ನನ್ನ ಈ ಎರಡೂ ಕೃತಿಗಳಿಗೂ ಉತ್ತೇಜನ ಕೊಡಬಲ್ಲ ಮಾನಸಿಕ ಶಕ್ತಿಯು ಒಂದೇ. ಆದರೆ ಈ ಎರಡೂ

ಕ್ರಿಯೆಗಳ ಹಿನ್ನೆಲೆಯಲ್ಲಿರುವ ಮಾನಸಿಕ ಸಂಘಟನೆಯ ಬಲಾಬಲಗಳಲ್ಲಿ ಮಾತ್ರ ಹೆಚ್ಚುಕಡಿಮೆಯಿದೆ. ಇಚ್ಛಾಶಕ್ತಿಯ ಹಿಂದೆ ಯಾವಾಗಲೂ ಸ್ವಯಂಪ್ರೀತ ಭಾವನೆಯ ಬಲವಾದ ಒಂದು ಮಾನಸಿಕ ಸಂಘಟನೆಯು ಕಾರ್ಯ ಮಾಡು ತ್ತಿರುತ್ತದೆಂದು ಮಾನಸ ಶಾಸ್ತ್ರಜ್ಞರು ಹೇಳುತ್ತಾರೆ. ಒಂದು ಕೃತಿಯು ಇಚ್ಛಾ ಶಕ್ತಿಯ ಕೃತಿಯೆನಿಸಿಕೊಳ್ಳಬೇಕಾದರೆ, ಅದು ನಮ್ಮ ಜೀವದಲ್ಲಿ ದೃಢವಾಗಿ ನೆಲಿಸಿದ ಅದ್ಭುತವಾದ ಮಾನಸಿಕ ಶಕ್ತಿಯಿಂದ ಚೇತನವನ್ನು ಪಡೆಯಬೇಕು. ಒಂದು ಹುಲ್ಲುಕಡ್ಡಿಯನ್ನು ಕೈಯಲ್ಲಿ ತೆಗೆದುಕೊಳ್ಳುವ ಕೃತಿಯು ಇಚ್ಛಾಶಕ್ತಿಯ ಕೃತಿಯೆನಿಸದು. ಆದರೆ ಆ ಹುಲ್ಲುಕಡ್ಡಿಯನ್ನೆತ್ತಲು ನನಗಿರುವ ಹಕ್ಕನ್ನು ಯಾರಾದರೂ ವಿರೋಧಿಸಿ ಆಹ್ವಾನವಿತ್ತಾಗ ನಾನು ಆ ಹುಲ್ಲುಕಡ್ಡಿಯನ್ನು ಕೈಯಲ್ಲಿ ತೆಗೆದುಕೊಂಡರೆ ಆ ಕೃತಿಯು ನಿಃಸ್ಸಂಶಯವಾಗಿಯೂ ಇಚ್ಛಾಶಕ್ತಿಯ ಕೃತಿಯೆನಿಸಿಕೊಳ್ಳಬಲ್ಲದು.

ಇಚ್ಛಾಶಕ್ತಿಯ ಈ ವಿವರಣೆಯಿಂದ ಕಂಡುಬರುವುದೇನು ? ಇಚ್ಛಾ ಶಕ್ತಿಯನ್ನು ಬೆಳೆಯಿಸುವ ಶಿಕ್ಷಣವಿಧಾನವು ಇತರ ಭಾವನೆಗಳನ್ನು ಬೆಳೆಯಿ ಸುವ ರೀತಿಯನ್ನೇ ಅನುಸರಿಸಬೇಕಾಗುತ್ತದೆ. ಬಾಲಕನ ಕಾರ್ಯಗಳಿಗೆ ಮೇಲಿಂದಮೇಲೆ ಆತಂಕ ಮಾಡಿದ್ದಾದರೆ, ಇಲ್ಲವೆ ಅವನು ಸದಾ ಎರಡನೆಯ ವರ ಹೇಳಿಕೆಯಂತೆ ನಡೆದದ್ದಾದರೆ, ಅವನಲ್ಲಿ ಬಲವಾದ ಭಾವನೆಗಳು ಬೆಳೆಯ ಲಾರವು. ಅದರಿಂದ ಅವನ ಇಚ್ಛಾಶಕ್ತಿಯು ಬಲಹೀನವಾಗುವುದು. ಅವನ ಪ್ರಥಮ ಇಚ್ಛೆಗಳು ಕೃತಿಗಿಳಿಯದೇ ವಿಫಲವಾಗುವವು. ಅದರಿಂದ ಅವನ ಮನಸ್ಸಿನಲ್ಲಿ ದುರ್ಭಾವನೆಗಳು ಒಳಗೊಳಗೇ ಬೆಳೆಯತೊಡಗುವವು. ಬಾಲಕ ನಿಗೆ ಸ್ವಾತಂತ್ರ್ಯವನ್ನು ಕೊಡದಿದ್ದರೆ ಹೀಗೆ ದುರ್ಮಾರ್ಗಕ್ಕೆ ಹಚ್ಚಿದಂತಾಗುವುದು. ಅವನು ಪ್ರಸಂಗಾನುಸಾರ ಧೈರ್ಯವಾಗಿ ನಡೆದುಕೊಳ್ಳುವುದನ್ನು ಕಲಿತುಕೊಳ್ಳ ಲಾರನು. ಇಚ್ಛಾಶಕ್ತಿಯು ಕುಂಠಿತವಾದರೆ ಬಾಲಕನು ಬಿಕ್ಕಟ್ಟಿನ ಸನ್ನಿವೇಶ ಗಳಲ್ಲಿ ನಿಷ್ಪ್ರಯೋಜಕ ರೀತಿಯಲ್ಲಿ ನಡೆಯತೊಡಗುವನು. ಅಂದಮೇಲೆ, ಇಚ್ಛಾ ಶಕ್ತಿಯನ್ನು ವೃದ್ಧಿಗೊಳಿಸಲು ಸಹ ಕ್ರೀಡಾತ್ಮಕ ಚಟುವಟಿಕೆಗಳಿಗೆ ಆಸ್ಪದ ಕೊಡುವುದೇ ಉತ್ತಮ. ಇಚ್ಛಾಶಕ್ತಿಯು ವೃದ್ಧಿಹೊಂದಿದ ಬಾಲಕರೇ ಭಾವೀ ಸ್ವಾವಲಂಬಿ ನಾಗರಿಕರಾಗಬಲ್ಲರು.

## ೫. ಶಿಕ್ಷಕ

ಮಗುವಿನ ಸ್ವಾತಂತ್ರ್ಯದ ತತ್ವದ ಮೇಲೆ ನಿರ್ಮಿತವಾದ ಶಿಕ್ಷಣ ಕ್ರಮದಲ್ಲಿ ಶಿಕ್ಷಕನ ಸ್ಥಾನವೇನು ? ಈ ಸಮಸ್ಯೆಯನ್ನು ಇಲ್ಲಿ ಪರಿಶೀಲಿಸೋಣ.

### ೧. ಶಿಕ್ಷಕನ ಕಾರ್ಯರಂಗ

'ಶಿಕ್ಷಕನು ಬಾಲಕರ ನಿರೀಕ್ಷಕನು.'— ಎಂದು ಮೊಂಟೇಸೋರಿಯವರು ಹೇಳಿದ್ದಾರೆ. ಇದನ್ನು ಕೇಳಿ ಶಿಕ್ಷಕನು ಅಚ್ಚರಿಗೊಳ್ಳಬಹುದು. ಆದರೆ ಅವನು ಇಲ್ಲಿ ಒಂದು ಮಾತನ್ನು ನೆನಪಿಡಬೇಕು. ಶಾಲೆಯ ಜೀವನವು ಜಗತ್ತಿನ ವಿಶಾಲವಾದ ಜೀವನದಿಂದ ಆಯ್ದು ತೆಗೆದ ಒಂದು ಕೃತ್ರಿಮ ಜೀವನ. ಈ ಕೃತ್ರಿಮ ಜೀವನವನ್ನು ನಿರ್ಮಿಸುವವನು ಶಿಕ್ಷಕ. ಅವನು ಶಿಕ್ಷಣ ರಂಗದ ಭೂಮಿಕೆಯನ್ನು ಸಿದ್ಧಗೊಳಿಸಿ ಅದರಲ್ಲಿ ಶಿಕ್ಷಣದ ಸಾಮಗ್ರಿಗಳನ್ನು ಹೊಂದಿಸಿಡುತ್ತಾನೆ. ಬಾಲಕರು ಅಭಿನಯಿಸಬೇಕಾದ ಸನ್ನಿವೇಶಗಳನ್ನು ಕಲ್ಪಿಸುತ್ತಾನೆ. ಅವರ ಕ್ರಿಯೆಗಳ ಪರಿಮಿತಿಯನ್ನು ಮೊದಲೇ ನಿಶ್ಚಯಿಸುತ್ತಾನೆ. ಮೊಂಟೇಸೋರಿ ಶಾಲೆಯಲ್ಲಿ ಮಗುವು ತನ್ನ ಇಚ್ಛೆಗೆ ಬಂದ ಕಾರ್ಯವನ್ನು ಕೈಕೊಳ್ಳಬಲ್ಲದು. ಆದರೆ ಅದು ಕೈಕೊಳ್ಳಬಲ್ಲ ಕ್ರಿಯೆಗಳನ್ನು ಶಿಕ್ಷಕನು ಮೊದಲೇ ನಿಶ್ಚಯಿಸಿರುತ್ತಾನೆ. ಮಗುವು ವಿವಿಧ ಆಕಾರದ ಗುಂಡುಗಳನ್ನು ಆಯಾ ಛಿದ್ರಗಳಲ್ಲಿ ಸೇರಿಸಬಲ್ಲದು; ಬಣ್ಣದ ಆಕೃತಿಗಳನ್ನು ಅನುಕ್ರಮವಾಗಿ ಜೋಡಿಸಬಲ್ಲದು; ಸೋಪಾನಗಳನ್ನು ಹತ್ತಿ ಇಳಿದು ಸಂಖ್ಯೆಗಳ ಎಣಿಕೆಯನ್ನು ಕಲಿಯಬಲ್ಲದು. ಈ ಬಗೆಯ ಕ್ರಿಯೆಗಳ ಹೊರತಾಗಿ ಬೇರೆ ಏನನ್ನೂ ಅದು ಮಾಡಲಾರದು. ಈ ಶಾಲೆಯಲ್ಲಿ ಬಾಲಕರು ಒಬ್ಬರಂತೆ ಇನ್ನೊಬ್ಬರು ಮಾಡುತ್ತಿರುವುದು ಕಂಡುಬರುವುದು. ಇದಕ್ಕೆ ಕಾರಣ ಶಿಕ್ಷಕನ ಇಚ್ಛಾಶಕ್ತಿ. ಮಗುವಿನ ಕ್ರಿಯೆಯ ಹಿನ್ನೆಲೆಯಲ್ಲಿ ಶಿಕ್ಷಕನ ಇಚ್ಛಾಶಕ್ತಿಯು ಕಾರ್ಯ ಮಾಡುತ್ತಿರುತ್ತದೆ. ಅವನು ಮಗುವು ಮಾಡತಕ್ಕ ಕ್ರಿಯೆಗಳನ್ನು ಅಪ್ರತ್ಯಕ್ಷವಾಗಿ ಸೂಚಿಸುತ್ತಾನೆ. ಅದರಿಂದ ಅವನು ಇಚ್ಛಿಸಿದ ಕಾರ್ಯಗಳನ್ನೇ ಬಾಲಕರು ಮಾಡುತ್ತಿರುತ್ತಾರೆ.

'ಶಿಕ್ಷಕನು ಬರಿಯ ಪ್ರೇಕ್ಷಕನಲ್ಲ; ಅವನು ಕ್ರಿಯಾತ್ಮಕ ನಿರೀಕ್ಷಕ.' —ಎಂದು ಮೊಂಟೇಸೋರಿಯವರು ಹೇಳಿದ್ದಾರೆ. ಈ ಮಾತು ಅತ್ಯಂತ

ಸಮಂಜಸವಾಗಿದೆ. ಸಾಧ್ಯವಿದ್ದಮಟ್ಟಿಗೆ ಅವನು ಮಗುವಿನ ಸಮೀಪ ದಲ್ಲಿಯೇ ಇರಬೇಕು. ಅಂದರೆ ಮಗುವಿಗೆ ಸಹಾಯ ನೀಡಲು ಅನುಕೂಲ ವಾಗುವುದು. ಮಗುವಿನ ಕಾರ್ಯದಲ್ಲಿ ಸುಮ್ಮಸುಮ್ಮನೆ ಕೈ ಹಾಕಬಾರದು. ಮಗುವು ಸಹಾಯ ಬಯಸಿದಾಗ ಮಾತ್ರ ಸಹಾಯ ನೀಡಬೇಕು. ಸಮ ಯಾನುಸಾರ ಸಲಿಗೆಯ ನುಡಿಯಿಂದ ಪರಿಣಾಮಕಾರಿಯಾಗುವಂತೆ ಸೂಚನೆ ಯನ್ನು ಕೊಡಬೇಕು. ಶಿಕ್ಷಕನು ಮಗುವಿನ ಅಭ್ಯಾಸ ಪ್ರಗತಿಯ ಪೂರ್ಣ ವಿವರಗಳನ್ನು ಬರೆದಿಡಬೇಕು.

## ೨. ಶಿಕ್ಷಕ ಮತ್ತು ವರ್ಗ ಶಿಕ್ಷಣ

ವರ್ಗಶಿಕ್ಷಣ ಮತ್ತು ವೇಳಾಪತ್ರಿಕೆಗಳು ತಮ್ಮ ಮೊದಲಿನ ನಿರ್ಬಂಧ ನಾತ್ಮಕ ಮೇಲ್ಮೆಯನ್ನು ಕಳೆದುಕೊಂಡಿರುವದು ನಿಜ. ಆದರೂ ಶಾಲೆಯ ಜೀವನದಲ್ಲಿ ಅವುಗಳಿಗೆ ಮಿತವಾದ ಸ್ಥಾನವಿದೆ. ಹಳೆಯ ಶಿಕ್ಷಣ ಪದ್ಧತಿ ಯಲ್ಲಿ ಅನೇಕ ತಪ್ಪುಗಳು ಸಮಾವೇಶವಾಗಿವೆ. ಅದರಂತೆ ಅದರಲ್ಲಿ ಅನೇಕ ಶತಮಾನಗಳಿಂದ ಮಾಡುತ್ತ ಬಂದ ಪ್ರಾಮಾಣಿಕ ಪರಿಶ್ರಮದ ಫಲವಾಗಿ ದೊರೆತ ಶಿಕ್ಷಣ ಕಲೆಯ ವಿಜಯಗಳೂ ಸಮಾವೇಶವಾಗಿವೆ. ಆ ಕಾಲದ ಶಿಕ್ಷಣ ಕಲೆಯ ವಿಜಯಗಳಲ್ಲಿ ಸೌಂದರ್ಯೋಪಾಸಕ ಪಾಠಗಳನ್ನು ದೊಡ್ಡ ಬಾಲಕ ವೃಂದಕ್ಕೆ ಹೇಳಿಕೊಡುವ ವಿಧಾನವು ಗಣನೀಯವಾಗಿದೆ. ಸೌಂದರ್ಯದ ಅಭಿರುಚಿಯನ್ನು ಹುಟ್ಟಿಸುವ ಕವಿತೆಯ ಪಾಠವನ್ನು ವೈಯ ಕ್ತಿಕವಾಗಿ ಕಲಿಸುವುದಕ್ಕಿಂತಲೂ ಒಂದು ಬಾಲಕ ಸಮೂಹಕ್ಕೆ ಕಲಿಸುವುದು ಮೇಲು. ಈ ಶಿಕ್ಷಣ ಕಲೆಯು ಈಗಲೂ ಅವಶ್ಯವಿದೆ. ಇಂತಹ ಪ್ರಾಚೀನ ಕಲೆಯ ಕೆಲವು ಉತ್ತಮ ವಿಧಾನಗಳನ್ನು ಶಿಕ್ಷಕನು ಪ್ರಸಂಗಾನುಸಾರ ಅನುಸರಿಸಬೇಕು.

## ೩. ಶಿಕ್ಷಕನ ವ್ಯಕ್ತಿತ್ವದ ಮಹತ್ವ

ಶಿಕ್ಷಕನು ಅಪರೋಕ್ಷವಾಗಿ ಉಳಿಯಲು ಪ್ರಯತ್ನ ಪಡಬಹುದು. ಆದರೂ ಅವನು ಬಾಲಕರ ದೃಷ್ಟಿಯಲ್ಲಿ ಒಬ್ಬ ಗಣ್ಯ ವ್ಯಕ್ತಿಯಾಗಿಯೇ ಕಾಣುವನು. ಅವನ ಕ್ರಿಯೆಗಳು ಬಾಲಕರಿಗೆ ಮಹತ್ವಪೂರ್ಣವಾಗಿ ಕಾಣಿ ಸುವುವು. ಅವನ ಬುದ್ಧಿಬಲ, ಪಾಂಡಿತ್ಯ, ಕಲಿಸುವ ಜಾಣ್ಮೆ ಮೊದಲಾದವು

ಗಳು ಬಾಲಕನ ಶಿಕ್ಷಣದಲ್ಲಿ ಬಹಳ ಪರಿಣಾಮಕಾರಿಯಾಗಿರುತ್ತವೆ. ಕಲೆ ಮತ್ತು ವಿಜ್ಞಾನಗಳ ಕಡೆಗೆ ಬಾಲಕರ ಪ್ರವೃತ್ತಿಯು ಒಲಿಯುವಂತೆ ಶಿಕ್ಷಕನು ಮಾಡಬೇಕಾಗುತ್ತದೆ. ಬಾಹ್ಯ ಜಗತ್ತಿನ ವಿಚಾರಗಳನ್ನು ಅವನು ಬಾಲಕರಿಗೆ ಒಯ್ದು ಮುಟ್ಟಿಸಬೇಕು; ಬಾಲಕರ ಅವಶ್ಯಕತೆಗಳನ್ನು ಅವನು ಬಾಹ್ಯ ಜಗತ್ತಿಗೆ ತಿಳಿಸಬೇಕು. ತನ್ನ ವಿದ್ಯಾರ್ಥಿಗಳಲ್ಲಿ ಅವನು ಆದರ್ಶದ ಬೀಜಗಳನ್ನು ಬಿತ್ತಬೇಕು. ಅವರಲ್ಲಿ ಕಾರ್ಯತತ್ಪರತೆಯನ್ನು ಹುಟ್ಟಿಸ ಬೇಕು. ಈ ಎಲ್ಲ ಕಾರ್ಯಗಳನ್ನು ಶಿಕ್ಷಕನು ತನ್ನ ಪವಿತ್ರ ವ್ಯಕ್ತಿತ್ವದ ನಿದರ್ಶನದಿಂದ ಸಾಧಿಸಬಲ್ಲನು.

ಚಿಕ್ಕಮಕ್ಕಳಿಗೆ ತಕ್ಕ ವಾತಾವರಣವನ್ನು ಕಲ್ಪಿಸಿಕೊಟ್ಟ ಮಾತ್ರಕ್ಕೆ ಶಿಕ್ಷಕನ ಕಾರ್ಯ ತೀರದು. ಶಿಕ್ಷಕನ ವ್ಯಕ್ತಿತ್ವವು ಮಹತ್ತರವಾದ ಜ್ಞಾನ ಮತ್ತು ಅನುಭವಗಳಿಂದ ಪಕ್ವವಾಗಿರಬೇಕು. ಅವನ ಇಂತಹ ವ್ಯಕ್ತಿತ್ವವು ಶಾಲೆಯ ವಾತಾವರಣದ ಒಂದು ಮುಖ್ಯ ಅಂಶ. ಅದು ಬೆಳೆಯತಕ್ಕ ಚಿಕ್ಕ ಮಕ್ಕಳ ಮನಸ್ಸಿನಮೇಲೆ ಶಾಶ್ವತವಾದ ಪರಿಣಾಮವನ್ನು ಉಂಟುಮಾಡ ಬಲ್ಲದು. ಶಿಕ್ಷಕನು ಒಳ್ಳೆಯ ಯೋಗ್ಯತೆಯುಳ್ಳವನಾದರೆ, ಬಾಲಕರು ಅವ ನಿಂದ ವಿವಿಧ ಸೂಕ್ಷ್ಮ ನಡತೆ ಕಲಿತುಕೊಳ್ಳುತ್ತಾರೆ. ಬಾಲಕರು ಅವನ ಅಂತಃಕರಣ, ಒಲಿಮೆ, ದೃಷ್ಟಿಕೋನಗಳನ್ನು ಗ್ರಹಿಸುತ್ತಾರೆ; ಅವನ ಸುಸಂಸ್ಕೃತ ಶೀಲ ಸ್ವಭಾವಗಳನ್ನು ಅನುಕರಣ ಮಾಡುತ್ತಾರೆ. ಅವನ ಬೆಲೆ ಗಳು ಅವರ ಬೆಲೆಗಳಾಗುತ್ತವೆ; ಅವನ ಆದರ್ಶಗಳು ಅವರ ಆದರ್ಶಗಳಾಗು ತ್ತವೆ. ಹೀಗಾಗುವುದು ಸಹ ಬಾಲಕರಿಗೆ ಗೋಚರವಾಗುವುದಿಲ್ಲ. ಬಾಲ ಕರ ಸಮಾಜಶೀಲ ಪ್ರವೃತ್ತಿಗಳನ್ನು ಕರುಣಾಮಯ ಚಟುವಟಿಕೆಗಳಲ್ಲಿ ತೊಡಗಿಸುವಂತಹ ಮಾರ್ಗದರ್ಶನವು ಶಿಕ್ಷಕನ ವ್ಯಕ್ತಿತ್ವದಿಂದ ದೊರೆಯು ತ್ತದೆ. ಏಕೆಂದರೆ, ಬಾಲಕರು ಬಹುತರವಾಗಿ ಶಿಕ್ಷಕನನ್ನೇ ಅನುಕರಣ ಮಾಡುತ್ತಾರೆ.

## ೪. ಶಿಕ್ಷಕನಿಂದ ಅನುಕರಣಶೀಲತನದ ಸದುಪಯೋಗ

ಅನುಕರಣ ಶೀಲತನವು ಬಾಲಕರ ಸಂಶೋಧಕ ಪ್ರವೃತ್ತಿಯನ್ನು ಕುಗ್ಗಿಸುತ್ತದೆಯೆಂದು ಕೆಲವು ಆಧುನಿಕ ಶಿಕ್ಷಕರು ತಿಳಿದಿದ್ದಾರೆ. ಆದರೆ ಈ

ತಿಳುವಳಿಕೆ ತಪ್ಪು. ಪ್ರಸಿದ್ಧ ಮೇಧಾವಿಗಳು ಸಹ ಮೊದಮೊದಲು ಹಿಂದೆ ಆಗಿಹೋದ ಪ್ರಸಿದ್ಧ ಪುರುಷರ ಕೃತಿಗಳನ್ನು ಅನುಕರಣ ಮಾಡಿದ್ದುದು ಕಂಡುಬರುತ್ತಿದೆ. ಪಂಪ, ಹೊನ್ನ, ರನ್ನ ಮೊದಲಾದ ಪ್ರಸಿದ್ಧ ಕನ್ನಡ ಕವಿಗಳು ಸಂಸ್ಕೃತ ಮಹಾ ಕಾವ್ಯಗಳ ಲಕ್ಷಣಗಳನ್ನೇ ಅನುಕರಿಸಿಲ್ಲವೆ ? ಈ ಮಾತಿನಿಂದ ಅವರ ಕಾವ್ಯಗಳ ಮಹತಿಗೆ ಭಂಗಬರುತ್ತದೆಯೆ ? ಎಂದಿಗೂ ಇಲ್ಲ. ನಿಜವಾಗಿ ನೋಡಿದರೆ, ಅನುಕರಣ ಶೀಲತನವು ವ್ಯಕ್ತಿತ್ವ ನಿರ್ಮಾಣ ಕಾರ್ಯದಲ್ಲಿಯ ಮೊದಲ ಹೆಜ್ಜೆ. ಅದಕ್ಕೆ ಎಷ್ಟು ಉತ್ತಮ ಅವಕಾಶ ವುಂಟೋ ಅಷ್ಟೇ ಉತ್ತಮ ವ್ಯಕ್ತಿತ್ವ ನಿರ್ಮಾಣವಾಗಬಲ್ಲದು. ವಾಸ್ತವಿಕ ಜೀವನದಲ್ಲಿ ಪರಿಪೂರ್ಣ ಜೀವಿಗಳು ದೊರೆಯುವುದು ಅಪರೂಪ. ಆದ ಕಾರಣ ಸಾಹಿತ್ಯದ ಮುಖಾಂತರ ಬಾಲಕರಿಗೆ ಪರಿಪೂರ್ಣ ಜೀವಿಗಳ ದರ್ಶನ ಮಾಡಿಸುವುದೊಳಿತು. ಬಾಲಕರ ಸ್ವತಂತ್ರ ಚಟುವಟಿಕೆಗಳಿಗೆ ಪೋಷಕ ವಾಗುವ ವಿಶಾಲ ಶೈಕ್ಷಣಿಕ ರಂಗವನ್ನೇರ್ಪಡಿಸಬೇಕು. ಇಂತಹ ರಂಗದಲ್ಲಿ ಅನುಕರಣಮಾಡಲು ಯೋಗ್ಯವಾದ ಅಂಶಗಳಿರಬೇಕು. ಜಾಣ ಮತ್ತು ಸಾಹಸವಂತ ಬಾಲಕರು ಅಷ್ಟು ಸಾಹಸವಂತರಲ್ಲದ ಮಂದ ಬುದ್ಧಿಯ ಬಾಲಕ ರಲ್ಲಿ ಅನುಕರಣ ಶೀಲತನವನ್ನು ಹೆಚ್ಚಿಸಬಲ್ಲರು. ಅದರಿಂದ ಅವರ ಗೂಢ ಶಕ್ತಿಗಳನ್ನು ಅವರಿಗೆ ತೋರಿಸಿಕೊಡಬಲ್ಲರು. ಅಂದಮೇಲೆ, ವರ್ಗದಲ್ಲಿ ಸಾಧ್ಯವಿದ್ದಮಟ್ಟಿಗೆ ಹೆಚ್ಚು ಬಾಲಕರಿರುವುದು ಒಳಿತು.

ಒತ್ತಾಯದಿಂದ ಅನುಕರಣ ಮಾಡಹಚ್ಚುವುದು ಕೇವಲ ಹುಚ್ಚುತನ. ಇದರಿಂದ ಬಾಲಕರಲ್ಲಿ ವಿರೋಧ ಭಾವನೆಯುಂಟಾಗುತ್ತದೆ. ಎಷ್ಟೋಸಲ ಶಿಕ್ಷಕನು ಉತ್ತಮ ಶೀಲ, ಸಾಹಿತ್ಯ, ವಿಜ್ಞಾನಗಳನ್ನು ಬಾಲಕರಿಗೆ ಒತ್ತಾಯ ಪಡಿಸಿ ಕಲಿಸಹೋಗುತ್ತಾನೆ. ಅದರಿಂದ ಅವು ಬಾಲಕರಿಗೆ ಪ್ರಿಯಕರವಾಗದೆ ತಿರಸ್ಕೃತವಾಗುವ ಸಂಭವವಿರುತ್ತದೆ. ಶಿಕ್ಷಕನ ಪ್ರಯತ್ನಗಳು ವಿಫಲವಾಗಲು ಬಹುಮಟ್ಟಿಗೆ ಇದೇ ಕಾರಣ.

## ೫. ಶಿಕ್ಷಕನಿಂದ ಸೂಚನಾಶಕ್ತಿಯ ಸದುಪಯೋಗ

ಶಿಕ್ಷಕನು ಶಿಕ್ಷಣದಲ್ಲಿ ಪ್ರತ್ಯಕ್ಷವಾಗಿಯಾಗಲಿ ಇಲ್ಲವೆ ಅಪ್ರತ್ಯಕ್ಷವಾಗಿ ಯಾಗಲಿ ಸೂಚನೆಯ ಮಾಯೆಯನ್ನು ಎಷ್ಟರಮಟ್ಟಿಗೆ ಪ್ರಯೋಗಿಸಬೇಕು ?

ಈ ವಿಚಾರದಲ್ಲಿ ಒಂದು ನಿರ್ಣಯಕ್ಕೆ ಬರುವುದು ಹಿತಕರ. ಹಿಂದು ಮುಂದು ವಿಚಾರಮಾಡದೆ ಇತರರ ವಿಚಾರಗಳನ್ನು ಅಂಗೀಕರಿಸುವುದು ಮನುಷ್ಯನ ಸಹಜ ಗುಣ. ಇದು ಒಂದು ದೌರ್ಬಲ್ಯವೆಂದು ಕೆಲವರು ತಿಳಿಯುತ್ತಾರೆ. ಆದರೆ ಈ ತಿಳುವಳಿಕೆ ತಪ್ಪು. ಸೂಚನೆಯನ್ನು ಅಂಗೀಕರಿಸುವ ಗುಣವು ಮನುಷ್ಯನಿಗೆ ಉಪಯುಕ್ತವಾಗಿದೆ. ವಿವೇಕಕ್ಕೆ ಸಮ್ಮತವಾಗುವಂತಹ ಜೀವನ ಕ್ರಮವನ್ನು ರಚಿಸಿಕೊಳ್ಳಬೇಕೆಂಬುದು ಮಾನವನ ಹಿರಿಯಾಸೆ. ಈ ಹಿರಿಯಾಸೆಯನ್ನು ಈಡೇರಿಸಿಕೊಳ್ಳಲು ಬಹುಕಾಲ ಬೇಕು. ಅಲ್ಲಿಯವರೆಗೆ ಜೀವನಗತಿಯನ್ನು ನಿಲ್ಲಿಸಲು ಬರುವುದಿಲ್ಲ. ಸೂಚನೆಯನ್ನು ಅಂಗೀಕರಿಸುವ ಗುಣದ ಸಹಾಯದಿಂದ ಜನರು ಜೀವನದ ಮಸುಮಸುಕಾದ ಜ್ಞಾನವನ್ನಾದರೂ ಮಾಡಿಕೊಳ್ಳಬಲ್ಲರು.

ಶಿಕ್ಷಕನು ಬಾಲಕರಿಂದ ಅದೃಶ್ಯನಾಗಲಾರ. ಅದರಂತೆ ಅವನು ಬಾಲಕರಿಗೆ ಸೂಚನೆಗಳನ್ನು ಮಾಡದೆ ಇರಲಾರ. ಸಾರಾಸಾರ ವಿಚಾರ ಮಾಡದೆ ಸೂಚನೆಯನ್ನು ಅಂಗೀಕರಿಸುವ ಗುಣವು ಮನುಷ್ಯನ ಸ್ವಯಂ ಪ್ರೇರಣಾತ್ಮಕ ಸ್ವಭಾವಕ್ಕೆ ವಿರೋಧವಾಗಿಲ್ಲ. ಮನುಷ್ಯನು ತನ್ನ ಸ್ವಭಾವದ ಮೇಲೆ ಪ್ರಭುತ್ವ ಪಡೆಯಲು ಅದು ಸಹಾಯ ಮಾಡಬಲ್ಲದು. ಆದುದರಿಂದ, ವಿದ್ಯಾರ್ಥಿಗಳ ಮನಸ್ಸಿನ ಮೇಲೆ ಶಿಕ್ಷಕನು ಸೂಚನೆಯ ಮುಖಾಂತರ ಪರಿಣಾಮವನ್ನು ಮಾಡಲು ಸ್ವತಂತ್ರನು. ಆದರೆ ಈ ಪರಿಣಾಮವನ್ನು ಅವನು ಬಾಲಕರ ಮೇಲೆ ಒತ್ತಾಯದಿಂದ ಹೇರಕೂಡದು. ಅವನು ತನ್ನ ಉಚ್ಚತನು ಜ್ಞಾನ ಮತ್ತು ಅನುಭವಸಾರಗಳನ್ನು ಅವರೆದುರಿಗೆ ಇರಿಸಬೇಕು. ಅದರ ಲಾಭವನ್ನು ಅವರು ತಮ್ಮ ಇಚ್ಛೆಗನುಸಾರವಾಗಿ ಮಾಡಿಕೊಳ್ಳಬಹುದು. ಇದರಿಂದ ಬಾಲಕರ ಶೀಲ ಸ್ವಭಾವಗಳೆರಡೂ ಉತ್ತಮಗೊಳ್ಳುವವು. ಶಿಕ್ಷಕನು ಸೂಚನೆಯ ಬಲದಿಂದ ವಿದ್ಯಾರ್ಥಿಗಳ ಮನಸ್ಸನ್ನು ಸತ್ಯಾನ್ವೇಷಣೆಯ ಕಡೆಗೆ ಹೊರಳಿಸಲು ಪ್ರಯತ್ನ ಮಾಡಬೇಕು. ಇಲ್ಲವಾದರೆ ಅವರ ಮನಸ್ಸು ಕೊನೆಯ ವರೆಗೆ ಸಂಕುಚಿತವಾಗಿ ಉಳಿಯುವ ಸಂಭವವಿದೆ. ಬಾಲಕರಿಗೆ ವಿವೇಕಯುಕ್ತ ಆದರ್ಶಗಳನ್ನು ತೋರಿಸಲು ಶಿಕ್ಷಕನು ಸೂಚಕ ಶಕ್ತಿಯನ್ನು ಉಪಯೋಗಪಡಿಸಿಕೊಳ್ಳತಕ್ಕದ್ದು. ಈ ಸಾಧನವನ್ನು ಪ್ರತ್ಯಕ್ಷವಾಗಿ ಪಾಠಗಳನ್ನು ಕಲಿಸುವಾಗ ಉಪಯೋಗಿಸಬಹುದು; ಇಲ್ಲವೆ ಓದ

ಹಚ್ಚುವ ಪುಸ್ತಕಗಳ ಆಯ್ಕೆ ಮಾಡುವಾಗ ಅಪ್ರತ್ಯಕ್ಷವಾಗಿ ಉಪಯೋಗಿಸ ಬಹುದು. ಹೀಗೆ ಸೂಚಕ ಶಕ್ತಿಯನ್ನು ಉಪಯೋಗಿಸಿಕೊಳ್ಳುವುದು ಶಿಕ್ಷಕನ ಯಥಾಯೋಗ್ಯವಾದ ಕರ್ತವ್ಯವಾಗಿದೆ.

## ೬. ಶಿಕ್ಷಕ ಮತ್ತು ನೈತಿಕ ಶಿಕ್ಷಣ

ಬಾಲಕರು ಮೂಲತಃ ಉತ್ತಮ ಹೃದಯರಾಗಿರುತ್ತಾರೆಂದು ಕ್ರೀಡಾತ್ಮಕ ಶಿಕ್ಷಣದ ಪುರಸ್ಕರ್ತರು ನಂಬುವುದುಂಟು. ಬಾಲಕರ ಹೃದಯದಲ್ಲಿ ಹುದುಗಿರುವ ನೈತಿಕ ಸೌಂದರ್ಯವು ಸಕಾಲದಲ್ಲಿ ಸಹಜವಾಗಿ ಕಾಣಿಸಿಕೊಳ್ಳುತ್ತದೆಯೆಂದು ಅವರು ತಿಳಿಯುತ್ತಾರೆ. ಇದು ಪ್ರಿಯಕರವಾದ ನಂಬುಗೆ. ಇದಕ್ಕೆ ಎದುರಾಗಿ ಇನ್ನೊಂದು ದುಃಖದಾಯಕ ನಂಬುಗೆಯೂ ಇದೆ. ಮಾನವನ ಹೃದಯವು ಎಲ್ಲ ಜೀವಿಗಳಿಗಿಂತಲೂ ಹೆಚ್ಚಾದ ಕಲ್ಮಿಷದಿಂದ ಕೂಡಿದೆ; ಇತರರಿಗೆ ದುಃಖ ಮತ್ತು ನೋವುಗಳನ್ನು ಉಂಟುಮಾಡಿ ಸಂತೋಷಪಡುವ ಪ್ರವೃತ್ತಿಯು ಮನುಷ್ಯನಲ್ಲಿದೆಯೆಂದು ಹಲವರು ನಂಬುತ್ತಾರೆ. ಕಳೆದ ಮಹಾಯುದ್ಧದಲ್ಲಿ ಆಕ್ರಮಣ ಶೀಲ ಶಕ್ತಿಗಳು ಬಣ್ಣಿಸಲು ಅಸದಳವಾದ ಕ್ರೂರ ಕೃತಿಗಳನ್ನೆಸಗಿದವು. ಅವುಗಳನ್ನು ನೆನೆಸಿಕೊಂಡರೆ ನಮ್ಮ ಅಂತರಾಳದಲ್ಲಿ ಹುದುಗಿದ ಕರಾಳ ಸ್ವರೂಪದ ದೈತ್ಯನ ಇರುವಿಕೆಯ ಬಗ್ಗೆ ನಾವೆಂದೂ ಸಂಶಯಪಡಲಾರೆವು. ಆದರೆ ಇಲ್ಲಿ ಒಂದು ಮಾತನ್ನು ಮಾತ್ರ ಮರೆಯ ಕೂಡದು. ಜೀವನದ ಉತ್ತಮ ರೀತಿಗಳು ಉತ್ತರೋತ್ತರವಾಗಿ ವೃದ್ಧಿ ಹೊಂದುತ್ತವೆ; ಕೆಟ್ಟ ರೀತಿಗಳು ಹಾಗೆ ವೃದ್ಧಿ ಹೊಂದಲಾರವು. ಉತ್ತಮ ಚಟುವಟಿಕೆಗಳು ಕೆಲಕಾಲ ಊರ್ಜಿತಾವಸ್ಥೆಯಲ್ಲಿದ್ದಂತೆ ಭಾಸವಾದರೂ, ಅವು ತಮ್ಮ ಕೊನೆಯ ವಿನಾಶದ ವಿಷಬೀಜಗಳನ್ನು ತಮ್ಮ ಒಡಲಲ್ಲಿಯೇ ಅಡಗಿಸಿಕೊಂಡಿರುತ್ತವೆ. ನಿರ್ಮಾಪಕ ಶಕ್ತಿಯ ವಿಕಾಸವನ್ನು ಬಯಸುವವರು ಉತ್ತಮತೆಯನ್ನು ಕಂಡುಕೊಳ್ಳುವ ವರೆಗೆ ತೃಪ್ತರಾಗಲಾರರು. ಆದರೆ ಮಾನವನ ನಾಗರಿಕತೆಯ ಇತಿಹಾಸವನ್ನು ಬಲ್ಲವರು ಈ ಉತ್ತಮತೆಯನ್ನು ಹುಡುಕುವ ಮಾರ್ಗದಲ್ಲಿ ಇರುವ ಆತಂಕಗಳನ್ನು ಊಹಿಸಬಲ್ಲರು. ಮನುಷ್ಯನು ಮನುಷ್ಯನನ್ನು ನಡೆಸಿಕೊಂಡ ಕರುಣ ಕಥೆಯನ್ನು ಕೇಳಿದವರು ಈ ಉತ್ತಮತೆಯನ್ನು ಹುಡುಕುವ ಮಾರ್ಗದಲ್ಲಿರುವ ಗಂಡಾಂತರಗಳನ್ನು

ಊಹಿಸಬಲ್ಲರು. ಉತ್ತಮತೆಯನ್ನು ಹುಡುಕುವ ಜೀವನ ಸಮಸ್ಯೆಗಳು ಹಲವು ಮಾನವ ಪುಂಗರನ್ನು ಸಹ ದಂಗುಬಡಿಸಿವೆ; ಬುದ್ಧಿವಂತ ಜನಾಂಗ ಗಳಿಗೆ ಹುಚ್ಚು ಹಿಡಿಸಿವೆ. ಅಂದಮೇಲೆ ಅನ್ಯರ ಸಹಾಯವಿಲ್ಲದೆ ಬಾಲ ಕರು ಉತ್ತಮತೆಯನ್ನು ಕಂಡುಕೊಳ್ಳಬಲ್ಲರೆಂದು ನಂಬುವುದು ಕಠಿಣ. ಬಾಲ್ಯದ ಸಹಜ ಪ್ರವೃತ್ತಿಗಳು ಉತ್ತಮತೆಯ ಕಡೆಗೆ ಒಲಿದಿರುವುವೆಂದು ನಂಬಿದರೂ ಸಹ ಈ ದಿಶೆಯಲ್ಲಿ ಶಿಕ್ಷಕನು ಮಾಡಬೇಕಾದ ಕಾರ್ಯ ಬಹಳವಿದೆ.

ಧರ್ಮ, ನೀತಿ ಮತ್ತು ರಾಜಕೀಯ ರಂಗಗಳಲ್ಲಿ ಶಿಕ್ಷಕನು ಹೇಗೆ ನಡೆಯಬೇಕೆಂಬುದನ್ನು ಮೇಲಿನ ಮಾತು ನಿಚ್ಚಳವಾಗಿ ತೋರಿಸುತ್ತದೆ. ಮಾನವ ಜನಾಂಗದ ಅನುಭವಾಮೃತದಿಂದ ಉದ್ಭವಿಸಿದ ಅನೇಕ ಉತ್ತಮ ಆದರ್ಶಗಳುಂಟು. ಅವುಗಳ ಸ್ಫೂರ್ತಿಗೆ ಒಬ್ಬ ಬಾಲಕನೂ ಸಹ ಎರವಾಗ ಕೂಡದು. ಶಿಕ್ಷಕನು ಬಾಲಕರಿಗೆ ಮಾನವ ಜನಾಂಗದ ಆದರ್ಶಗಳಿಂದ ಸ್ಫೂರ್ತಿ ಪಡೆಯಲು ಹುರಿದುಂಬಿಸಬೇಕು. ಬಾಲಕ ಬಾಲಕಿಯರು ಪ್ರಾಪ್ತ ವಯಸ್ಕರಾದಾಗ ಅವರಲ್ಲಿ ಉತ್ತಮ ಆದರ್ಶಗಳ ಬಗ್ಗೆ ಉತ್ಸುಕತೆಯು ಹೆಚ್ಚುತ್ತದೆ. ಶಾಲೆಯಲ್ಲಿ ಆದರ್ಶಗಳ ಬಗ್ಗೆ ಮಾತುಕತೆಯು ಸಹಜವಾಗಿ ಹೊರಟಾಗ ಶಿಕ್ಷಕನು ನಿರ್ಮಲ ಮನಸ್ಸಿನಿಂದ ನಿಚ್ಚಳವಾಗಿ ಅವುಗಳನ್ನು ಬಾಲಕರ ಸಂಗಡ ಚರ್ಚಿಸತಕ್ಕದ್ದು. ಹೀಗೆ ಮಾಡುವುದರಿಂದ ಸಮಾಜದ ಮೂಢ ನಂಬಿಕೆಗಳ ಹುರುಳು ಹೊರಬೀಳುತ್ತದೆ. ಬಾಲಕರು ಅವುಗಳ ದುಷ್ಪರಿಣಾಮದಿಂದ ಮುಕ್ತರಾಗುತ್ತಾರೆ. ಅಜ್ಞಾನದ ಅಂಧಃಕಾರವು ಹರಿದು ಜ್ಞಾನಸೂರ್ಯನ ಪ್ರಕಾಶವು ಪಸರಿಸುತ್ತದೆ. ಶಿಕ್ಷಕ–ಬಾಲಕರ ನಡುವಿನ ಚರ್ಚೆಯು ನಿಸ್ಪೃಹವಾಗಿ ನಡೆಯಬೇಕು. ಚರ್ಚೆಯ ವಾತಾ ವರಣವು ಸಹನಶೀಲತೆ ಮತ್ತು ಗಂಭೀರ ಭಾವದಿಂದ ತನ್ಮಯವಾಗಿರಬೇಕು. ಇಂತಹ ಬಿಚ್ಚು ಮನಸ್ಸಿನ ಚರ್ಚೆಯಿಂದ ಸಣ್ಣ ಮಕ್ಕಳು ತಮ್ಮ ಮನೋ ಮಂದಿರದ ಅಂತರಾಳದಲ್ಲಿ ಹುದುಗಿದ ಪ್ರಬಲ ಶಕ್ತಿಗಳನ್ನು ಕಂಡುಕೊಳ್ಳ ಬಲ್ಲರು. ಇಂತಹ ಅರಿವಿನಿಂದ ಅವರು ತಮ್ಮ ಮುಂದಿನ ಜೀವನದ ನಿರ್ಣಾ ಯಕ ಸನ್ನಿವೇಶಗಳಲ್ಲಿ ಯೋಗ್ಯ ಮಾರ್ಗವನ್ನು ತಾವಾಗಿಯೇ ಅನುಸರಿಸ ಬಲ್ಲರು.

## ೭. ಶಿಕ್ಷಕನು ವಿದ್ಯಾರ್ಥಿ ರಾಜ್ಯದ ಅಧ್ಯಕ್ಷ

ದೊಡ್ಡ ಹುಡುಗರ ಶೀಲ ಸ್ವಭಾವಗಳನ್ನು ರೂಪುಗೊಳಿಸುವ ಕಾರ್ಯವು ತನ್ನದಲ್ಲವೆಂದು ಶಿಕ್ಷಕನು ಭಾವಿಸಬಹುದು. ಆದರೂ ತನ್ನ ಹೆಚ್ಚಿನ ವಯಸ್ಸು, ಜ್ಞಾನ, ಅನುಭವಗಳಿಂದ ತಾನಾಗಿಯೇ ಹೊರಬೀಳುವ ಪ್ರಭಾವ ಕಿರಣಗಳನ್ನು ಅವನು ನಿರ್ಬಂಧಿಸಿಡಲಾರನು. ಒಂದು ವೇಳೆ ಹೀಗೆ ನಿರ್ಬಂಧಿಸಿಡುವುದು ಸಾಧ್ಯವಿದ್ದರೂ ಅವನು ಹಾಗೆ ಎಂದೂ ಮಾಡ ತಕ್ಕದ್ದಲ್ಲ. ಶಿಕ್ಷಕನು ತನ್ನ ಪುಟ್ಟ ರಾಜ್ಯದ ಅಧ್ಯಕ್ಷನಂತಿದ್ದಾನೆ. ಈ ಮಹತ್ವದ ಸ್ಥಾನದಿಂದ ಅವನಿಗೆ ಅಸಾಧಾರಣ ಅಧಿಕಾರವು ದೊರೆಯುತ್ತದೆ. ಆದಕಾರಣ ಅವನು ತನ್ನ ಪುಟ್ಟ ರಾಜ್ಯದ ಶ್ರೇಷ್ಠ ನಾಗರಿಕನಂತೆ ವರ್ತಿಸ ಬೇಕು. ತನ್ನ ಕರ್ತವ್ಯಗಳನ್ನು ದಕ್ಷತೆಯಿಂದ ನಿರ್ವಹಿಸಬೇಕು. ವಿದ್ಯಾ ಭ್ಯಾಸಗಳ ಮುಖಾಂತರ ಶಿಕ್ಷಕನು ಶಾಲೆಯ ಬೌದ್ಧಿಕ ವಾತಾವರಣದ ಮೇಲೆ ತನ್ನ ಪ್ರಭಾವವನ್ನು ಬೀರುತ್ತಾನೆ. ಜಗತ್ತನ್ನೇ ವಿಭಜಿಸಿ ಹೊಯ್ದಾ ಡಿಸುವಂತಹ ನಿಷ್ಠೆಗಳ ಮತ್ತು ಆದರ್ಶಗಳ ಪ್ರಥಮ ಪರಿಚಯವು ಬಾಲಕ ನಿಗೆ ಶಾಲೆಯ ಹೊರಗೇ ಉಂಟಾಗುತ್ತದೆ. ಶಿಕ್ಷಕನು ಅವುಗಳ ನಿಜವಾದ ಅರ್ಥವನ್ನು ಶಾಲೆಯಲ್ಲಿ ಹೇಳಿಕೊಡಲೇಬೇಕು. ಅಂದರೆ ಮಾತ್ರ ಬಾಲಕರು ತಮ್ಮ ಹೊಣೆಯರಿತು ತಮ್ಮ ಮುಂಬರುವ ಜೀವನದ ಪಕ್ಷಪಂಗಡಗಳನ್ನು ಆಯ್ದುಕೊಳ್ಳಲು ಶಕ್ತರಾಗುವರು.

## ೮. ಶಿಕ್ಷಕನು ಶಾಲೆಯ ಮೂಲೋದ್ದೇಶಗಳ ರಕ್ಷಕ

ಹೊಣೆಗಾರಿಕೆಯ ಕೃತಿಗಳಿಗೆ ಮಾರ್ಗದರ್ಶನ ಮಾಡಬಲ್ಲ ನೈತಿಕ ವಿಚಾರಗಳನ್ನು ಬಾಲಕರು ಸ್ವಾನುಭವದಿಂದಲೇ ಕಲಿಯಬೇಕು. ಸ್ವಾನು ಭವದಿಂದ ಅರಿತುಕೊಂಡ ನೈತಿಕ ವಿಚಾರಗಳಿಗೆ ಮಾತ್ರ ಬೆಲೆಯಿದೆ. ಅಂದಮೇಲೆ ಶಾಲೆಯ ಆಡಳಿತವನ್ನು ಸಾಧ್ಯವಿದ್ದಮಟ್ಟಿಗೆ ಬಾಲಕರಿಗೆ ಬಿಟ್ಟುಕೊಡುವುದು ಯೋಗ್ಯ. ಈ ಮಾತು ಅತ್ಯಂತ ಮಹತ್ವದ್ದಿದೆ. ಬಾಲಕರು ಮಾಡಬಹುದಾದ ಸಣ್ಣಪುಟ್ಟ ತಪ್ಪುಗಳನ್ನು ಶಿಕ್ಷಕನು ಶಾಂತ ಚಿತ್ತದಿಂದ ಕೆಲಕಾಲ ನಿರೀಕ್ಷಿಸುವುದು ಉತ್ತಮ. ಮುಂದೆ ಬಾಲಕರು ತಾವಾಗಿಯೇ ತಮ್ಮ ತಪ್ಪುಗಳನ್ನು ಕಂಡುಕೊಳ್ಳಬಲ್ಲರು. ಆಮೇಲೆ ಅವು

ಗಳನ್ನು ತಾವಾಗಿಯೇ ಪರಿಹರಿಸಿಕೊಳ್ಳಬಲ್ಲರು. ಬಾಲಕರು ಶಾಲೆಯ ನಾಗರಿಕರು. ಆದರೆ ಶಿಕ್ಷಕನು ಶಾಲೆಯ ಶ್ರೇಷ್ಠ ನಾಗರಿಕ. ಆದುದರಿಂದ ಅವನ ಮೇಲೆ ಒಂದು ಹೆಚ್ಚಿನ ಹೊಣೆಯಿದೆ. ಕೆಲವು ಬಾಲಕರ ಅನೈತಿಕ ಚಟುವಟಿಕೆಯಿಂದಾಗಲಿ ಇಲ್ಲವೆ ಉಳಿದ ಬಾಲಕರ ಬಲಹೀನತೆಯಿಂದಾಗಲಿ ಶಾಲೆಯ ಜೀವನದ ಮೂಲೋದ್ದೇಶಗಳಿಗೆ ಧಕ್ಕೆ ಬಾರದಂತೆ ನೋಡಿಕೊಳ್ಳು ವುದು ಶಿಕ್ಷಕನ ಪವಿತ್ರ ಕರ್ತವ್ಯ. ಅಂತಹ ಪ್ರಸಂಗವೊದಗಿದಾಗ ಶಿಕ್ಷಕನು ತೀವ್ರ ಕ್ರಮ ತೆಗೆದುಕೊಳ್ಳಬೇಕು. ಅನೀತಿಯನ್ನು ಶಾಲೆಯ ಜೀವನದಿಂದ ಶಿಕ್ಷಕನು ದೂರವಾಗಿರಿಸಬೇಕು. ಈ ಮಾತು ಸ್ವಾತಂತ್ರ್ಯದ ತತ್ವಕ್ಕೆ ವಿರೋಧವಾಗಿಲ್ಲ. ಹಿಂದೆ ಹೇಳಿದಂತೆ, ಸ್ವಾತಂತ್ರ್ಯವು ಶಿಸ್ತಿನ ಕಟ್ಟಿಗೆ ಒಳಪಟ್ಟು ಸಾಧಿಸತಕ್ಕ ಸಂಗತಿ.

## ೯. ಶಿಕ್ಷಕನು ವಿದ್ಯಾರ್ಥಿ–ನಾಯಕ

ಶಾಲೆಯ ಸ್ಥಿತಿಗತಿಗಳು ಸುಗಮವಾಗಿದ್ದರೆ ಬಹುಶಃ ಶಿಕ್ಷಕನು ಬಾಲಕರ ನಾಯಕನಾಗಿರುತ್ತಾನೆ; ಮತ್ತು ಅವನು ಶಾಲೆಯ ಶಿಸ್ತಿನ ಆಧಾರಸ್ತಂಭನಾ ಗಿರುತ್ತಾನೆ. ಶಾಲೆಯಲ್ಲಿ ಇತರ ಉಪನಾಯಕರೂ ಇರುತ್ತಾರೆ. ಕೆಲವು ಸಲ ಅವರು ಕಣ್ಣಿಗೆ ಬೀಳಬಹುದು; ಆದರೆ ಹಲವು ಸಲ ಅವರು ಅಗೋಚರ ವಾಗಿಯೇ ಇರಬಹುದು. ಶಿಕ್ಷಕನು ಒಂದಿಲ್ಲೊಂದು ರೀತಿಯಿಂದ ಅವರನ್ನು ಎದುರಿಸಲೇಬೇಕು. ಶಾಲೆಯ ಸ್ಥಿತಿಗತಿಗಳು ಸುಗಮವಾಗಿರುವಲ್ಲಿ ಈ ಉಪ ನಾಯಕರು ಶಿಸ್ತಿನ ಬೆಂಬಲಿಗರಾಗಿರುತ್ತಾರೆ; ಅವು ದೋಷಯುಕ್ತವಾಗಿರು ವಲ್ಲಿ ಅವರು ಶಿಸ್ತಿನ ವಿರೋಧಿಗಳಾಗಿರುತ್ತಾರೆ. ಶಿಕ್ಷಕನಾದವನು ಈ ಉಪನಾ ಯಕರು ಯಾರು ಎಂಬುದನ್ನು ಕಂಡುಹಿಡಿಯಬೇಕು; ಅವರ ನಿಷ್ಠೆಯನ್ನೂ ಪ್ರೀತಿಯನ್ನೂ ಸಂಪಾದಿಸಬೇಕು; ಅವರನ್ನು ಹಾದಿಗೆ ತರಲು ಪ್ರಯತ್ನ ಮಾಡಬೇಕು. ಆದಾಗ್ಯೂ ಅವರು ಶಾಲೆಯ ಶಾಂತತಾಭಂಗಕ್ಕೆ ಕಾರಣವಾ ದರೆ ಅವರನ್ನು ಶಿಕ್ಷಕನು ಬಗ್ಗುಬಡಿಯಲೇಬೇಕು. ಆದರೆ ಹೀಗೆ ಮಾಡುವ ಮುಂಚೆ ಅವನು ತನ್ನ ಕಾರ್ಯದ ಸಾಧುತನವನ್ನು ಸಂಪೂರ್ಣವಾಗಿ ಪರೀ ಕ್ಷಿಸಬೇಕು. ಏಕೆಂದರೆ, ಎಷ್ಟೋ ಸಲ ನಿಜವಾದ ನಾಯಕ–ಬಂಡುಕೋರ ರನ್ನು ದಂಡಿಸುವ ಬದಲು ಅವರ ನಿರ್ಬಲ ಅನುಯಾಯಿಗಳನ್ನು ದಂಡಿಸುವ ಸಂಭವವೂ ಇದೆ. ಹೀಗಾಗದಂತೆ ಶಿಕ್ಷಕನು ಜಾಗರೂಕನಾಗಿರಬೇಕು.

## ೧೦. ಶಿಕ್ಷಕನು ಬಾಲಕರ ಮಿತ್ರ

ಶಿಕ್ಷಕ ಮತ್ತು ಬಾಲಕರು ಮಿತ್ರತ್ವದಿಂದ ಇರದೇ ಇರುವ ಶಾಲೆಯ ನೈತಿಕ ವಾತಾವರಣವು ಆರೋಗ್ಯಕರವಾಗಿರುವುದು ಸಾಧ್ಯವಿಲ್ಲ. ಆದುದರಿಂದ, ಶಿಕ್ಷಕನು ಬಾಲಕನ ಮಿತ್ರತ್ವವನ್ನು ಗಳಿಸುವುದು ಅತ್ಯವಶ್ಯ. ಇದನ್ನು ಸಾಧಿಸಲು ಅವನು ತನ್ನ ಇಳಿ ವಯಸ್ಸಿನಲ್ಲಿಯೂ ಸಹ ಸಣ್ಣ ಮಕ್ಕಳಲ್ಲಿಯ ಅಭಿರುಚಿಗಳನ್ನೂ ಉತ್ಸಾಹಗಳನ್ನೂ ಕಾಯ್ದುಕೊಂಡಿರಬೇಕಾಗುತ್ತದೆ. ತೋರಿಕೆಯ ಸಹಾನುಭೂತಿಯು ನಿರುಪಯುಕ್ತ. ಏಕೆಂದರೆ, ಅಪ್ರಾಮಾಣಿಕ ಸಹಾನುಭೂತಿಯನ್ನು ಬಾಲಕರು ಬಹು ಬೇಗ ಕಂಡುಹಿಡಿಯಬಲ್ಲರು. ಅಪ್ರಾಮಾಣಿಕ ಶಿಕ್ಷಕನನ್ನು ಬಾಲಕರು ಎಂದಿಗೂ ಪ್ರೀತಿಸುವುದಿಲ್ಲ. ಶಿಕ್ಷಣದಲ್ಲಿ ಆಸಕ್ತಿಯುಳ್ಳಂತಹ ಮನುಷ್ಯನೂ ಸಹ ಸ್ವಭಾವತಃ ಬಾಲ್ಯಾವಸ್ಥೆಯ ಅಪೌಢ ಗುಣಗಳಿಗೆ ಎರವಾಗಿರಬಹುದು. ಅಂಥವನು ಶಿಕ್ಷಣರಂಗವನ್ನು ಬಿಟ್ಟು ಬೇರಡೆಗೆ ತನ್ನ ಪರಿಶ್ರಮವನ್ನು ಹೊರಳಿಸುವುದು ಮೇಲು.

# ೬. ಶಿಸ್ತು

ಕ್ರೀಡಾತ್ಮಕ ಶಿಕ್ಷಣ ಪದ್ಧತಿಯಲ್ಲಿ ಶಿಸ್ತು ಎಂಬ ಗ್ರಹಿಕೆಯ ಗತಿಯೇನು ? ಈ ಸಮಸ್ಯೆಯನ್ನು ತಿಳಿದುಕೊಳ್ಳುವ ಮೊದಲು ಶಿಸ್ತು ಮತ್ತು ನಿಯಮಿತತನ ಎಂಬ ಎರಡು ವಿಚಾರಗಳಲ್ಲಿರುವ ಭಿನ್ನತೆಯನ್ನು ತಿಳಿದುಕೊಳ್ಳಬೇಕು. ಈ ಎರಡೂ ವಿಚಾರಗಳು ಬೇರೆ ಬೇರೆ ಮಾನಸಿಕ ಅಂಶಗಳಿಂದ ಉದ್ಭವಿಸಿವೆ.

## ೧. ಶಾಲೆಯ ನಿಯಮಿತತನದ ಮೂಲ ಮತ್ತು ಪ್ರಯೋಜನೆ

ಶಾಲೆಯ ನಿಯಮಿತತನವೆಂದರೆ ಶಾಲೆಯ ಜೀವನದ ಉದ್ದೇಶವನ್ನು ಸಫಲಗೊಳಿಸಲು ಬೇಕಾಗುವ ಸ್ಥಿತಿಗತಿಗಳನ್ನು ಕಾಯ್ದುಕೊಳ್ಳುವುದು ಎಂದು ಅರ್ಥ. ಬಾಲಕರ ಅನುಕರುಣ ಶೀಲತನ ಮತ್ತು ದಿನಚರಿಯ ಪ್ರವೃತ್ತಿಗಳ ಮೇಲೆ ಈ ನಿಯಮಿತತನವು ಅವಲಂಬಿಸಿದೆ. ಇತರರ ವಿಚಾರ, ಅನಿಸುವಿಕೆ ಮತ್ತು ಕ್ರಿಯೆಗಳನ್ನು ಸಾರಾಸಾರ ವಿಚಾರಮಾಡದೆ ಅಂಗೀಕರಿಸುವ ಗುಣಕ್ಕೆ ಅನುಕರಣ ಶೀಲತನವೆನ್ನುತ್ತಾರೆ. ಪರಿಚಿತವಿದ್ದ ಕ್ರಿಯೆಯನ್ನೇ ಪುನಃ ಪುನಃ ಮಾಡುತ್ತ ಹೋಗುವ ಗುಣಕ್ಕೆ ದಿನಚರಿಯ ಪ್ರವೃತ್ತಿಯೆನ್ನುತ್ತಾರೆ. ಜಾಣ ಶಿಕ್ಷಕನಾದವನು ಈ ಗುಣಗಳ ಸಹಾಯದಿಂದ ಶಾಲೆಯ ನಿಯಮಿತತನವನ್ನು ಕಾಯ್ದುಕೊಳ್ಳುವನು.

ದಿನಚರಿಯು ಒಮ್ಮೆ ಸ್ಥಾಪಿತವಾದರೆ ಅದು ತಾನಾಗಿಯೇ ಮುಂದೆ ಸಾಗುತ್ತಿರುತ್ತದೆ. ಆದುದರಿಂದ ಮೊದಮೊದಲು ಸರಳವಾದ ಮತ್ತು ಉತ್ತಮವಾದ ದಿನಚರಿಯನ್ನು ಸ್ಥಾಪಿಸುವುದು ಶಿಕ್ಷಕನ ಕರ್ತವ್ಯ. ಇಂತಹ ದಿನಚರಿಯು ಸಹಜವಾಗಿ ಪರಿವರ್ತನೆ ಹೊಂದಿದರೆ ಶಿಕ್ಷಕನು ಆ ಪರಿವರ್ತನೆಯನ್ನು ತಡೆಯಕೂಡದು. ಅವನು ಅದರಲ್ಲಿ ಅನವಶ್ಯಕವಾದ ಬದಲಾವಣೆಯನ್ನು ಮಾಡಕೂಡದು. ಬಾಲಕರು ಪಾಲಿಸುತ್ತಿರುವ ದಿನಚರಿಯು ಅತೃಪ್ತಿಕರವಾಗಿದ್ದರೂ ಸಹ ಶಿಕ್ಷಕನು ಅದನ್ನು ತಾಳ್ಮೆಯಿಂದ ಸಹಿಸಿಕೊಳ್ಳಬೇಕು. ಕ್ರಮೇಣ ಯಾರಿಗೂ ಅನಿಸದ ರೀತಿಯಲ್ಲಿ ಅದನ್ನು ಬದಲಿಸಲು

ಅವನು ಪ್ರಯತ್ನಮಾಡಬೇಕು. ಶಾಲೆಯ ದಿನಚರಿಯ ವಿರುದ್ಧ ನಡೆದ ಬಾಲಕರು ತನ್ನ ವೈಯಕ್ತಿಕ ವಿರೋಧಿಗಳೆಂದು ಭಾವಿಸಕೂಡದು. ಎಲ್ಲರ ಅನುಕೂಲತೆಗಾಗಿ ದಿನಚರಿಯಿರುತ್ತದೆ. ಅದರ ಪರಂಪರೆಯನ್ನು ಕಾಯ್ದು ಕೊಳ್ಳುವುದು ಎಲ್ಲರಿಗೂ ಬೇಕಾಗಿರುತ್ತದೆ. ಆದುದರಿಂದ ದಿನಚರಿಯ ವಿರೋಧಿಗಳ ಸಂಗಡ ಶಿಕ್ಷಕನು ಬಾಲಕರ ಪ್ರತಿನಿಧಿಯಂತೆ ವರ್ತಿಸಬೇಕು.

ಒಂದು ಯಂತ್ರದ ಮೂಲ ಶಕ್ತಿಗಳು ಒಂದರೆನಿಮಿಷ ಸ್ಥಿರತೆಯ ಅವಸ್ಥೆಗೆ ಬಂದಾಗ ಅದನ್ನು ಆ ಯಂತ್ರದ ಕೀಲ ಚಕ್ರವು ಮುಂದೆ ಚಲಿಸುವಂತೆ ಮಾಡುತ್ತದೆ. ಶಾಲೆಯ ದಿನಚರಿಯು ಶಾಲೆಯಲ್ಲಿ ಕೀಲ ಚಕ್ರವು ಮಾಡುವಂತಹ ಕ್ರಿಯೆಯನ್ನೇ ಮಾಡುತ್ತಿರಬೇಕು. ಇಂಥ ದಿನಚರಿಯು ಶಾಲೆಯ ಪರಂಪರಾಗತ ಆಚಾರ ವಿಚಾರಗಳನ್ನು ಕಾಯುವುದರಲ್ಲಿ ಸಹಾಯಕವಾಗಬಲ್ಲದು. . ಒಂದು ಶಾಲೆಯ ಪರಂಪರಾಗತ ಆಚಾರ ವಿಚಾರಗಳ ಪ್ರಭಾವದಲ್ಲಿ ಬಾಲಕರು ಕೆಲವು ಕಾಲ ಮುಳುಗಿ ಎದ್ದದ್ದಾದರೆ, ಅವರಲ್ಲಿಯೂ ಸಹ ಆ ಆಚಾರ ವಿಚಾರಗಳು ನಿಶ್ಚಯವಾಗಿ ರೂಢಿಗೊಳ್ಳುತ್ತವೆ.

## ೨. ಶಿಸ್ತು ಒಂದು ಶ್ರೇಷ್ಠ ಮಾನಸಿಕ ಸಂಘಟನೆ

ಶಿಸ್ತು ಒಂದು ಬಾಹ್ಯ ನಡತೆಯಲ್ಲ. ಅದು ಮನಸ್ಸಿನ ಅಂತರಂಗದಿಂದ ಉದ್ಭವಿಸುವ ನಡತೆ; ಅವ್ಯವಸ್ಥಿತ ಪ್ರವೃತ್ತಿಗಳಿಗೆ ಒಂದು ವ್ಯವಸ್ಥಿತ ರೂಪ ಕೊಡುವ ನಡತೆ; ಅಪವ್ಯಯದಿಂದ ತುಂಬಿದ ಜೀವನದಲ್ಲಿ ನಿಯಂತ್ರಣವನ್ನುಂಟು ಮಾಡುವ ನಡತೆ; ಒಂದು ಶ್ರೇಷ್ಠ ಆದರ್ಶದ ಕಟ್ಟುನಿಟ್ಟಿಗೆ ಒಳಗಾಗಿ ಯೋಗ್ಯತೆಯನ್ನು ಪಡೆದುಕೊಳ್ಳುವ ನಡತೆ. ಶಿಸ್ತಿನ ನಿಯಂತ್ರಣವನ್ನು ನಮ್ಮ ಸ್ವಭಾವದ ಕೆಲವಂಶಗಳು ವಿರೋಧಿಸಬಹುದು. ಆದರೂ ಈ ನಿಯಂತ್ರಣವು ಸಾಮಾನ್ಯವಾಗಿ ಸ್ವಸಂತೋಷದಿಂದ ಬರತಕ್ಕದ್ದು. ಪರಿಪೂರ್ಣತೆಯ ಆದರ್ಶದ ನಿಯಂತ್ರಣಕ್ಕೆ ಸ್ಫೂರ್ತಿಯು ಒಳಗೆ ಮಿಡಿಯುವ ಜೀವನಾಡಿಯ ಸಹಜ ಕ್ರಿಯೆಯಿಂದ ಬರತಕ್ಕದ್ದು. ಶಿಸ್ತು ಹೀಗೆ ಜಾಗ್ರತಾವಸ್ಥೆಯ ಮನೋನಿರ್ಧಾರದಿಂದ ರೂಪುಗೊಂಡ ಮೇಲ್ತರಗತಿಯ ಮಾನಸಿಕ ಸಂಘಟನೆ.

ಉದ್ದೇಶಪೂರಿತ ಪ್ರಯತ್ನದ ಫಲದಿಂದ ಶಾರೀರಿಕ ಬಲಪ್ರದರ್ಶನ ಮಾಡುವ ವ್ಯಕ್ತಿಯ ಚಲನವಲನಗಳು ಸುಂದರವಾಗಿ ಕಾಣುತ್ತವೆ.

ಆದುದರಿಂದ ಅವುಗಳಿಗೆ ಶಿಸ್ತಿನ ಚಲನವಲನಗಳೆಂದು ಅನ್ನುತ್ತೇವೆ. ಯಾವ ನೊಬ್ಬ ಮನುಷ್ಯನು ತನ್ನ ಕಠಿಣ ಕಾಲದ ಕಟು ಅನುಭವಗಳಿಂದ ಪಾಠ ಕಲಿತು ತನ್ನ ಪ್ರವೃತ್ತಿಗಳನ್ನು ಉತ್ತಮಗೊಳಿಸಿಕೊಂಡರೆ, ಅವನನ್ನು ಶಿಸ್ತು ಪೂರಿತ ವ್ಯಕ್ತಿಯೆಂದು ಕರೆಯುತ್ತೇವೆ. ಹೀಗೆ ವಿರೋಧಾತ್ಮಕ ವಾತಾ ವರಣವನ್ನೆದುರಿಸಿ ಘನವಂತಿಕೆಯನ್ನು ಪಡೆದ ಗಾಂಧೀಜಿಯವರು ಶಿಸ್ತು ಪೂರಿತ ವ್ಯಕ್ತಿಯೆಂದು ಕರೆಯಲ್ಪಡುತ್ತಾರೆ. ಅಪರಿಪೂರ್ಣ ಮಾನಸಿಕ ಸಂಘಟನೆಯ ಮೇಲೆ ಪರಿಪೂರ್ಣತೆಯನ್ನು ಪಡೆದ ಮಾನಸಿಕ ಸಂಘಟ ನೆಯ ಶಾಶ್ವತವಾದ ಪ್ರಭುತ್ವವೇ ಇಂತಹ ವ್ಯಕ್ತಿಗಳ ಶಿಸ್ತಿನ ಮೂಲ.

### ೩. ಶಿಸ್ತಿನ ಬೆಳವಣಿಗೆಯ ಕ್ರಮ

ಶಿಸ್ತಿನ ಬೆಳವಣಿಗೆಯ ಕ್ರಮದಲ್ಲಿ ಒಂದು ನಿಶ್ಚಿತ ಮಾನಸಿಕ ಅನು ಕ್ರಮವಿದೆ. ಮೊದಲು ಒಬ್ಬ ವ್ಯಕ್ತಿಯು ಒಂದು ಆದರ್ಶ ಕೃತಿಯನ್ನು ಸಾಧಿಸಲು ಆತುರನಾಗಿರಬೇಕು. ಆ ಕೃತಿಯನ್ನೆಸಗಲು ಸದ್ಯ ತನ್ನಲ್ಲಿ ಯೋಗ್ಯತೆಯಿಲ್ಲ ಎಂಬ ಎಚ್ಚರಿಕೆ ಅವನಿಗಿರಬೇಕು. ಆ ಕೃತಿಯನ್ನೆಸಗಬಲ್ಲ ಬೇರೊಬ್ಬ ವ್ಯಕ್ತಿಯ ಪರಿಚಯ ಅವನಿಗೆ ಆಗಬೇಕು. ಆಮೇಲೆ ಆದರ್ಶ ಕೃತಿಯನ್ನೆಸಗಲು ತನ್ನಲ್ಲಿ ಸದ್ಯ ಅಂಶಗಳ ಕೊರತೆಯಿದೆಯೆಂಬುದರ ಅರಿವು ಅವನಿಗುಂಟಾಗಬೇಕು. ಅವನು ತನ್ನ ಚಿತ್ತವನ್ನು ತನ್ನಲ್ಲಿಯ ಕೊರತೆ ಗಳನ್ನು ಹೋಗಲಾಡಿಸುವ ರೀತಿಯ ಮೇಲೆ ಕೇಂದ್ರೀಕರಿಸಬೇಕು. ಕೊನೆಗೆ ಆ ರೀತಿಯನ್ನು ಸಾಧಿಸಲು ಪ್ರಾಮಾಣಿಕತನದಿಂದ ಪ್ರಯತ್ನ ಮಾಡಬೇಕು. ಇಂತಹ ಪ್ರಯತ್ನದಿಂದ ಅವನು ಆದರ್ಶ ಕೃತಿಯನ್ನೆಸಗಲು ಪ್ರಾವೀಣ್ಯತೆ ಯನ್ನು ಪಡೆಯಬೇಕು. ಹೀಗೆ ಒಮ್ಮೆ ಆದರ್ಶ ಕೃತಿಯು ಹಸ್ತಗತವಾದರೆ ಅವನ ಮನಸ್ಸಿನಲ್ಲಿ ಉತ್ಸುಕತೆಯುಂಟಾಗುವುದು. ಇದಲ್ಲದೆ ಈ ಸಾಧನೆಯು ಅವನ ವ್ಯಕ್ತಿತ್ವದ ಒಂದು ಶಾಶ್ವತವಾದ ಅಂಶನಾಗಿ ಪರಿಣಮಿಸುವುದು.

### ೪. ಶಾಲೆಯ ಶಿಸ್ತಿನ ಸ್ವರೂಪ

ಶಾಲೆಯಲ್ಲಿ ಬಾಲಕನಿಗೆ ತನ್ನ ಶಿಕ್ಷಕರಿಂದ ಮತ್ತು ತನ್ನ ಸಂಗಡಿಗ ರಿಂದ ದೊರೆಯುವ ಶಿಸ್ತು ಇದೇ ಸ್ವರೂಪದ್ದಾಗಿರುತ್ತದೆ. ಅವರು ಅವನಿಗೆ ಉತ್ತಮ ಜೀವನ ವಿಧಾನವನ್ನು ತೋರಿಸುತ್ತಾರೆ. ಅವನು ಅದನ್ನು ತನ್ನ ದನ್ನಾಗಿ ಮಾಡಿಕೊಳ್ಳಲು ಪ್ರಯತ್ನಪಡುತ್ತಾನೆ. ಒಂದು ಉತ್ತಮ ಶಾಲೆಗೆ

ತನ್ನದೇ ಆದ ಒಂದು ಪರಂಪರೆಯಿರುತ್ತದೆ. ಅದು ಬಾಲಕನ ಮನಸ್ಸಿನ ಮೇಲೆ ಪರಿಣಾಮವುಂಟುಮಾಡುತ್ತದೆ. ಅದು ಪರಿಪೂರ್ಣವಾದ ಜೀವನದ ರೀತಿಯೆಂದು ಅವನಿಗೆ ಅನಿಸುತ್ತದೆ. ಆ ಜೀವನದ ಪ್ರವರ್ತಕನಾಗಲು ಅವನಿಗೆ ಹೆಮ್ಮೆಯೆನಿಸುತ್ತದೆ. ಶಾಲೆಯ ಅಭ್ಯಾಸಪತ್ರಿಕೆಯ ವಿಷಯಗಳಿಂದ ದೊರೆಯುವ ಶಿಸ್ತಿನಲ್ಲಿಯೂ ಇವೇ ಅಂಶಗಳು ಮುಖ್ಯವಾಗಿರುತ್ತವೆ. ವೈಜ್ಞಾನಿಕ ವಿಷಯಗಳನ್ನು ಕಲಿಯುವಾಗ ಪ್ರಸಿದ್ಧ ಸಂಶೋಧಕರು ಸಾಧಿಸಿದ ಉಚ್ಚತಮ ವಿಚಾರಗಳ ಪರಂಪರೆಯ ಮೇಲ್ಮೆಯನ್ನು .ಬಾಲಕನು ಗ್ರಹಿಸುತ್ತಾನೆ. ಪ್ರಸಿದ್ಧ ವಾಙ್ಮಿಗಳು ಸಾಧಿಸಿದ ಭಾಷಾ ಪ್ರೌಢಿಮೆಯನ್ನು ತನ್ನದನ್ನಾಗಿ ಮಾಡಿಕೊಳ್ಳಲು ಅವನು ಆತುರನಾಗುತ್ತಾನೆ. ಮಹಾಕಲಾವಿದರ ಜಾಣ್ಮೆಯನ್ನು ಕಲಿತುಕೊಳ್ಳಬಯಸುವ ಕಲೋಪಾಸಕನಂತೆ ಬಾಲಕನು ಉಚ್ಚಕಲೆಯ ಪರಮಭಕ್ತನಾಗುತ್ತಾನೆ.

### ೫. ಅಪರಾಧಿಯನ್ನು ಪವಿತ್ರಗೊಳಿಸುವ ರೀತಿ

ಶಾಲೆಯ ಜೀವನದಲ್ಲಿ ಅಪರಾಧಿಯನ್ನು ದಂಡಿಸುವ ರೀತಿಯು ಶಿಸ್ತಿಗೆ ಸಂಬಂಧಿಸಿದ ವಿಷಯವಾಗಿದೆ. ದಂಡಿಸುವ ಉದ್ದೇಶ ಮೂಲತಃ ಸಾಧಕವಾಗಿರಬೇಕು. ಅಪಾಯಕಾರಕ ಕಾರ್ಯಗಳನ್ನು ಮಾಡಬಾರದೆಂದು ಬಾಲಕನಮೇಲೆ ನಿರ್ಬಂಧನೆಗಳನ್ನು ಹಾಕುವುದರಲ್ಲಿ ಯಾವ ಪ್ರಯೋಜನವೂ ಇಲ್ಲ. ಅವನು ತನ್ನ ಕರ್ತವ್ಯಗಳನ್ನು ಸ್ವಸಂತೋಷದಿಂದ ಮಾಡಲು ಅವನನ್ನು ಹುರುದುಂಬಿಸುವುದು ಹೆಚ್ಚು ಪರಿಣಾಮಕಾರಿಯಾದ ರೀತಿ. ಮಹಾ ಅಪರಾಧಿಗಳ ಸುಧಾರಣೆಯ ಕ್ರಮದಲ್ಲಿಯೂ ಸಹ ಈ ಮಾತನ್ನು ಈಗ ಒಪ್ಪಿಕೊಳ್ಳಲಾಗಿದೆ. ಆದರೆ ಈ ಸುಧಾರಣಾತ್ಮಕ ರೀತಿಯು ಸರಿಯೆಂದು ಕಂಡರೂ ಅದು ತೀವ್ರ ಕಾರ್ಯರಂಗಕ್ಕೆ ಬರದಾಗಿದೆ. ಕೇವಲ ನಿರ್ಬಂಧನಾತ್ಮಕ ದಂಡನೆಯು ನಿಜವಾದ ಔಷಧಿಯಲ್ಲ. ವಿನಾಶಮಾರ್ಗ ಹಿಡಿದ ಅಪರಾಧಿಯ ಪ್ರವೃತ್ತಿಗಳನ್ನು ವಿಕಾಸಮಾರ್ಗಕ್ಕೆ ಒಯ್ಯುವುದೇ ದಿವ್ಯೌಷಧಿ. ಇದಕ್ಕೆ "ಪವಿತ್ರ ಭಾವನೆ ಪ್ರೇರಣಾತ್ಮಕ" ರೀತಿಯೆಂದು ಅನ್ನುತ್ತಾರೆ.

ಪವಿತ್ರ ಭಾವನೆಗೆ ಪ್ರೇರಣೆ ಕೊಡುವುದೆಂದರೆ ಬಾಲಕನ ವಿನಾಶಕಾರಕ ಪ್ರವೃತ್ತಿಗಳಲ್ಲಿ ಹುದುಗಿದ್ದ ಬೇರೆ ಬೇರೆ ಮಾನಸಿಕ ಅಂಶಗಳನ್ನು ವಿಂಗಡಿಸಿ, ಪುನಃ ಅವುಗಳನ್ನು ಉತ್ತಮ ಭಾವನೆಗಳ ಸುತ್ತಲೂ ಒಂದುಗೂಡಿಸಿ, ಈ

ಭಾವನೆಗಳ ಚೇತನೆ ಕೊಡುವುದು ಎಂದು ಅರ್ಥ. ಬಾಲಕನ ಮನಸ್ಸಿನ ಅಂತರಾಳದಲ್ಲಿ ಹುದುಗಿದ ವಿನಾಶಕಾರಕ ಅಂಶಗಳನ್ನು ಗುರುತಿಸಬಲ್ಲ ಮತ್ತು ಆ ಅಂಶಗಳನ್ನು ತೃಪ್ತಿಕರವಾದ ಬೇರೊಂದು ಪವಿತ್ರ ಭಾವನೆಯಲ್ಲಿ ಒಂದುಗೂಡಿಸಬಲ್ಲ ಜಾಣ ಶಿಕ್ಷಕನು ಪಾಪಕುಂಡದಲ್ಲಿ ಬೀಳಬಹುದಾದ ಅನೇಕ ಬಾಲಕರನ್ನು ಕಾಪಾಡಬಲ್ಲನು. ಇದರಿಂದ ಅವನು ಗೈಯುವ ಮಾನವ ಕಲ್ಯಾಣಕ್ಕೆ ಮಿತಿಯಿಲ್ಲ. ಹೋಮರ ಲೇನ ಎಂಬವರು ತಮ್ಮ ಪುಟ್ಟ ರಾಜ್ಯದಲ್ಲಿ ದುಷ್ಟ ಪ್ರವೃತ್ತಿಗಳ ಸೆಳೆತದಲ್ಲಿ ಸಿಲುಕಿದ ಅನೇಕ ಕಿರಿಯರನ್ನು ಪುನಃ ಉತ್ತಮ ನಾಗರಿಕರನ್ನಾಗಿ ಮಾಡಿದರು. ಅವರ ಯಶಸ್ಸಿನ ಮೂಲ ಮಹಿಮವು ಇದೇ ಬಗೆಯದಾಗಿದೆ.

## ೬. ಅಪ್ರಯೋಜಕ ದಂಡನೆ

ಬಂಡಾಯವೃತ್ತಿಯ ಬಾಲಕರನ್ನು ಹೊಡೆದು ಬಡೆದು ಹಾದಿಗೆ ತರುವ ರೀತಿಯು ಬಹುಕಾಲದಿಂದ ಪ್ರಚಲಿತವಿದೆ. ಇದರಿಂದ ದೊರೆಯುವ ಯಶಸ್ಸು ತೋರಿಕೆಯದು. ನಿಜವಾಗಿ ನೋಡಿದರೆ, ಇದರಿಂದ ಅನೇಕಸಲ ಶಾಶ್ವತವಾದ ದುಷ್ಪರಿಣಾಮವುಂಟಾಗುತ್ತದೆ. ಅದು ಬೇನೆಯ ಮೂಲ ಕಾರಣವನ್ನು ಉಪಚರಿಸದೆ ಕೇವಲ ಮೇಲಿನ ಗಾಯುಗಳನ್ನು ಉಪಚರಿಸುತ್ತದೆ. ಏಕೆಂದರೆ, ಕೆಲವು ಸಲ ಅನುಚಿತ ಕ್ರಿಯೆಗಳ ರೂಪದಲ್ಲಿ ಹೊರಬಿದ್ದ ಬಾಲಕರ ಪ್ರವೃತ್ತಿಗಳು ಹತ್ತಿಕ್ಕಲ್ಪಡುತ್ತವೆ; ಇನ್ನೂ ಕೆಲವು ಸಲ ಉಚಿತ ಕ್ರಿಯೆಗಳ ರೂಪದಲ್ಲಿ ಹೊರಬಿದ್ದ ಬಾಲಕರ ಪ್ರವೃತ್ತಿಗಳೂ ಸಹ ಹತ್ತಿಕ್ಕಲ್ಪಡುತ್ತವೆ; ಹೀಗೆ ಹತ್ತಿಕ್ಕಲ್ಪಟ್ಟ ಪ್ರವೃತ್ತಿಗಳು ಬಾಲಕರ ಮನಸ್ಸಿನ ಅಂತರಾಳದಲ್ಲಿ ಹೋರಾಟ ನಡೆಸುತ್ತಿರುತ್ತವೆ. ಈ ಮನಸ್ಸಿನ ಆಂತರಿಕ ಹೋರಾಟವೇ ಮುಂದೆ ಬಾಲಕರ ಬಂಡಾಯ ವೃತ್ತಿಗೆ ಕಾರಣವಾಗುತ್ತದೆ. ತಾವು ಹೀಗೇಕೆ ವರ್ತಿಸುತ್ತಿರುವೆವೆಂಬುದೂ ಅವರಿಗೆ ತಿಳಿಯುವುದಿಲ್ಲ. ಎಷ್ಟೋ ಸಲ ಈ ಮನಸ್ಸಿನ ಆಂತರಿಕ ಹೋರಾಟವು ಬಾಲಕರನ್ನು ತಮ್ಮ ಸಂಗಡಿಗರ ಸಂಗಡ ಬೆರೆಯದಂತೆ ಮಾಡುತ್ತದೆ. ಅದರಿಂದ ಅವರು ಮುಗ್ಧಸ್ವಭಾವವುಳ್ಳವರಾಗುತ್ತಾರೆ. ಹೀಗೆ ಬಂಡಾಯ ವೃತ್ತಿಯನ್ನು ಹಿಡಿದ ಬಾಲಕರನ್ನಾಗಲಿ ಇಲ್ಲವೆ ಮುಗ್ಧ ಸ್ವಭಾವದವರನ್ನಾಗಲಿ ಹೊಡೆದು ಬಡೆದು ಹಾದಿಗೆ ತರುವುದು ಸಾಧ್ಯವಿಲ್ಲ. ಹಾಗೆ ಮಾಡುವುದು ನಿಷ್ಪ್ರಯೋಜಕ.

## ೭. ದಂಡನೆಯ ಪರಿಮಿತಿ

ಅನಿಯಮಿತತನ, ಅಪ್ಪಣೆ ಪಾಲಿಸದೆ ಇರುವುದು ಮೊದಲಾದ ಶಾಲೆಯ ವ್ಯವಸ್ಥೆಗೆ ಭಂಗ ತರುವಂತಹ ಕ್ರಿಯೆಗಳಿಗಾಗಿ ಬಾಲಕರನ್ನು ದಂಡಿಸುವುದು ಯೋಗ್ಯ. ಹಾಗೆ ಮಾಡುವುದರಲ್ಲಿ ಎಲ್ಲರ ಹಿತವೂ ಇದೆ. ಆ ದಂಡನೆಗೆ ಇಡೀ ಶಾಲೆಯ ಬಾಲಕರ ಹೃತ್ಪೂರ್ವಕ ಬೆಂಬಲವಿರತಕ್ಕದ್ದು. ಇಲ್ಲವಾದರೆ ಅದರಿಂದ ಯಾವ ನೈತಿಕ ಪರಿಣಾಮವೂ ಉಂಟಾಗಲಾರದು. ಸಣ್ಣ ಪುಟ್ಟ ಸಮಾಜವಿರೋಧೀ ಕ್ರಿಯೆಗಳನ್ನೆಸಗಿವ ಇಲ್ಲವೆ ಅವ್ಯವಸ್ಥಿತ ಕ್ರಿಯೆಗಳನ್ನೆಸಗಿದ ಬಾಲಕನನ್ನು ಸಾಮೂಹಿಕ ಕಾರ್ಯದಿಂದ ಬೇರ್ಪಡಿಸುವುದು ಯೋಗ್ಯವಾದ ದಂಡನೆಯೆನಿಸುತ್ತದೆ. ಇತರ ಬಾಲಕರು ಆನಂದದಿಂದ ಒಂದು ಕಾರ್ಯದಲ್ಲಿ ತತ್ಪರರಾದಾಗ ತಾನು ಸುಮ್ಮನೆ ಕಾಲಹರಣ ಮಾಡುವುದು ಅವನಿಗೆ ಅಸಹ್ಯವೆನಿಸುತ್ತದೆ. ಅದರಿಂದ ಅವನಿಗೆ ತಕ್ಕ ಪ್ರಾಯಶ್ಚಿತ್ತವಾಗುತ್ತದೆ. ಆದರೆ ಬೇಸರವನ್ನುಂಟುಮಾಡುವ ಶಾಲೆಯ ವಾತಾವರಣ, ನಿದ್ರೆಯಿಲ್ಲದ ಅವಸ್ಥೆ, ಉತ್ತಮ ಹವೆಯ ಕೊರತೆ, ಶಾರೀರಿಕ ಚಟುವಟಿಕೆಗಳು ಇಲ್ಲದಿರುವಿಕೆ ಮೊದಲಾದ ಕಾರಣಗಳಿಗಾಗಿ ಅವ್ಯವಸ್ಥಿತ ಕ್ರಿಯೆಗಳುಂಟಾಗುವುದುಂಟು. ಇಂತಹ ಪ್ರಸಂಗದಲ್ಲಿ ಬಾಲಕನನ್ನು ಸಾಮೂಹಿಕ ಕಾರ್ಯದಿಂದ ಬೇರ್ಪಡಿಸುವುದು ನಿರುಪಯುಕ್ತ. ಹೇಗೆ ಹೇಗೆ ಅಪರಾಧವು ಪಾಪದ ಮಟ್ಟಕ್ಕೆ ಏರುತ್ತದೆಯೋ ಹಾಗೆ ಹಾಗೆ ದೈಹಿಕ ದಂಡನೆಯು ನಿರುಪಯುಕ್ತವಾಗುತ್ತ ಹೋಗುತ್ತದೆ. ಕೇವಲ ಪವಿತ್ರ ಭಾವನೆಯ ಪ್ರೇರಣೆಯಿಂದ ಮಾತ್ರ ಪಾಪದಿಂದ ಬಾಲಕನನ್ನು ಮುಕ್ತಗೊಳಿಸುವುದು ಸಾಧ್ಯ. ಅತೃಪ್ತಿಕರವಾದ ಹಿಂದಿನ ಜೀವನದ ಕಡೆ ನೋಡಿ ದಂಡಿಸದೆ, ಯಾವಾಗಲೂ ಆಶಾದಾಯಕವಾದ ಮುಂದಿನ ಜೀವನದ ಕಡೆ ನೋಡಿ ದಂಡಿಸಬೇಕು. ಇತರರ ದೃಷ್ಟಿಯಲ್ಲಿ ತಾನು ಪಾಪಿಯೆಂದು ಕಾಣುವೆನೆಂದು ಮನಗಂಡರೆ ಬಾಲಕನು ನಾಚಿಕೆ ಪಡಬಹುದು. ಆದರೆ ಅದರಿಂದ ನಿಜವಾದ ಹೃದಯಪರಿವರ್ತನೆಯಾಗದು. ಕೆಟ್ಟ ಮಾರ್ಗದ ಬದಲಾಗಿ ಉತ್ತಮ ಮಾರ್ಗವನ್ನು ಅವನು ಕಂಡುಕೊಂಡಾಗ ಮಾತ್ರ ಅವನಲ್ಲಿ ನಿಜವಾದ ಹೃದಯ ಪರಿವರ್ತನೆಯುಂಟಾಗಬಲ್ಲದು. ಜಾಣ ಶಿಕ್ಷಕನಾದವನು ಬಾಲಕನ ವ್ಯಂಗತನದ ತೋರಿಕೆಯ ಚಿಹ್ನೆಗಳನ್ನು ಉಪಚರಿಸದೆ ಅದರ ಮೂಲ ಕಾರಣವನ್ನು

ಪರಿಹರಿಸಲು ಪ್ರಯತ್ನ ಪಡುತ್ತಾನೆ; ಬಾಲಕನ ವಿನಾಶಕಾರಕ ಪ್ರವೃತ್ತಿಗಳನ್ನು ಜಾಣ್ಮೆಯಿಂದ ಮಾನಸಿಕ ಸ್ವಾಸ್ಥ್ಯದ ಕಡೆಗೆ ಹೊರಳಿಸುತ್ತಾನೆ.

## ೮. ನಿರ್ಭೀತಿಯು ಶಿಸ್ತಿನ ಮೇಲ್ಮೆ

ಕೊನೆಗೆ ಒಂದು ಸಾಮಾನ್ಯ ಸಂಗತಿಯನ್ನು ಪ್ರಸ್ತಾಪಿಸಬೇಕಾಗಿದೆ. ದಂಡನೆ ಮತ್ತು ದಂಡನೆಯ ಭೀತಿಗಳೇ ಶಾಲೆಯ ಶಿಸ್ತಿನ ಆಧಾರಸ್ತಂಭಗಳೆಂಬ ನಂಬುಗೆಯು ಹಿಂದಕ್ಕೆ ಶಿಕ್ಷಣ ಪ್ರಪಂಚದಲ್ಲಿ ಬಲವಾಗಿ ಬೇರೂರಿತ್ತು. ಈ ನಂಬುಗೆಯು ಒಂದು ಹಿಂಸಾತ್ಮಕ ಮೂಢ ತಿಳುವಳಿಕೆಯೆಂಬ ಅಭಿಪ್ರಾಯವು ಈಚೆಗೆ ಬೆಳೆಯತೊಡಗಿದೆ. ಈ ಅಭಿಪ್ರಾಯಕ್ಕೆ ವಾಸ್ತವಿಕ ಸಂಗತಿಗಳ ಬೆಂಬಲ ವಿದೆ. ದಂಡನೆಯ ಭೀತಿಯ ಕಾರ್ಮೋಡಗಳು ಯಾವಾಗಲೂ ಕವಿದಿರು ವಂತಹ ಶಾಲೆಯು ಅಂತಹ ಭೀತಿಯ ಲವಲೇಶವೂ ಇಲ್ಲದ ಶಾಲೆಗಿಂತ ಯಾವ ಮಾತಿನಲ್ಲಿಯೂ ಸಹ ಶ್ರೇಷ್ಠತೆಯನ್ನು ಪ್ರಕಟಗೊಳಿಸುತ್ತಿಲ್ಲ. ನಿಯಮಿತತನ ದಲ್ಲಿಯೂ, ಅಭ್ಯಾಸದಲ್ಲಿಯೂ, ಶೀಲ ಸ್ವಭಾವಗಳಲ್ಲಿಯೂ, ನಿರ್ಮಾಪಕ ಚಟು ವಟಿಕೆಗಳಲ್ಲಿಯೂ ದಂಡನೆಯ ಭೀತಿಯಿಲ್ಲದ ಶಾಲೆಯು ದಂಡನೆಯ ಭೀತಿ ಯಿಂದ ತುಂಬಿದ ಶಾಲೆಗಿಂತಲೂ ಹೆಚ್ಚು ಪ್ರಗತಿಯನ್ನು ತೋರಿಸುತ್ತಿದ್ದುದು ಕಂಡುಬರುತ್ತದೆ. ಈ ಮಾತನ್ನು ಅನೇಕ ಅನುಭವಿಕ ಶಿಕ್ಷಕರೂ ಒಪ್ಪುತ್ತಾರೆ. ಶಾಲೆಯಲ್ಲಿ ಅಪರಾಧಗಳು ಕಾಣಿಸಿಕೊಳ್ಳಲೇಬೇಕು. ಶಿಕ್ಷಕರು ಅವುಗಳನ್ನು ಪರಿಹರಿಸಲೇಬೇಕು. ನಿಸರ್ಗದತ್ತ ಗುಣಗಳ ದೋಷದಿಂದ ಅಪರಾಧಗಳು ಉಂಟಾಗುತ್ತವೆಂದು ಭಾವಿಸುವುದು ತಪ್ಪು. ಅಪರಾಧಗಳು ಅತೃಪ್ತಿಕರವಾದ ರೀತಿಯಲ್ಲಿ ಮಾನಸಿಕ ಪ್ರವೃತ್ತಿಗಳ ಜೋಡಣೆಯನ್ನು ಸೂಚಿಸುವ ಚಿಹ್ನೆಗಳು ಮಾತ್ರ. ಅಭ್ಯಾಸಕ್ರಮದಲ್ಲಿಯ ದೋಷಗಳಿಂದ, ಶಿಕ್ಷಣದ ರೀತಿಯಲ್ಲಿಯ ದೋಷಗಳಿಂದ, ಶಾಲೆ ಮತ್ತು ಮನೆಗಳ ಸ್ಥಿತಿಗತಿಗಳ ದೋಷಗಳಿಂದ, ದೈಹಿಕ ಮತ್ತು ಮಾನಸಿಕ ದೋಷಗಳಿಂದ, ಬಾಲಕನ ಜೀವನದಲ್ಲಿ ದುಷ್ಟ ಪ್ರವೃತ್ತಿಗಳು ತಲೆಯೆತ್ತುತ್ತವೆ. ಇವುಗಳ ಮೂಲ ಕಾರಣಗಳನ್ನು ಪರಿಹರಿಸಿ ಪವಿತ್ರ ಭಾವನೆ ಗಳಿಗೆ ಪ್ರೇರಣೆ ಕೊಡುವುದೇ ದಂಡನೆಯ ಮರ್ಮ. ಇದೇ ಶಿಸ್ತನ್ನು ಕಾಪಾಡುವ ಗುಟ್ಟು.

## ೭. ಅಭ್ಯಾಸಪತ್ರಿಕೆ

ಶಾಲೆಯಲ್ಲಿ ಏನನ್ನು ಕಲಿಸಬೇಕು ? ಯಾವ ದೃಷ್ಟಿಯಿಂದ ಕಲಿಸಬೇಕು ? ಯಾವ ತತ್ವಗಳ ಆಧಾರದ ಮೇಲೆ ಅಭ್ಯಾಸಪತ್ರಿಕೆಯನ್ನು ರಚಿಸಬೇಕು ? —ಎಂಬ ಸಮಸ್ಯೆಯನ್ನು ಇಲ್ಲಿ ಪರಿಶೀಲಿಸಬೇಕಾಗಿದೆ.

### ೧. ಉಪಯುಕ್ತತೆಯ ದೃಷ್ಟಿಕೋನ

ಉಪಯುಕ್ತತೆಯ ದೃಷ್ಟಿಯಿಂದ ಅಭ್ಯಾಸಪತ್ರಿಕೆಯನ್ನು ರಚಿಸಬೇಕೆಂದು ಜನಸಾಮಾನ್ಯರು ಹೇಳುತ್ತಾರೆ. ತಮ್ಮ ಮಕ್ಕಳ ಮುಂಬರುವ ಜೀವನದಲ್ಲಿ ಉಪಯೋಗಬೀಳಬಹುದಾದ ವಿಷಯಗಳನ್ನು ಕಲಿತುಕೊಳ್ಳಬೇಕೆಂದು ಅವರು ಇಚ್ಛಿಸುತ್ತಾರೆ. ತಮ್ಮ ಮಕ್ಕಳು ಅಲ್ಪಸ್ವಲ್ಪ ನಿರುಪಯುಕ್ತ ವಿಷಯವನ್ನು ಕಲಿತರೆ ಅದು ಅವರಿಗೆ ಭೂಷಣಪ್ರಾಯವಾದುದೆಂದೇ ಭಾವಿಸುತ್ತಾರೆ. ಆದರೆ ಅವರು ಉಪಯುಕ್ತತೆಯ ವ್ಯಾಖ್ಯೆಯ ಪರಿಮಿತಿಯನ್ನು ಕಿರಿದಾಗಿ ಮಾಡುವ ಸಂಭವವಿದೆ. ಜನಸಾಮಾನ್ಯರ ಈ ವಿಚಾರವನ್ನು ಹೀಯಾಳಿಸುವುದು ಉಚಿತವಲ್ಲ. ಏಕೆಂದರೆ, ಅವರ ಈ ವಿಚಾರವು ಪರಿಶುದ್ಧ ಭಾವನೆಯಿಂದ ಹೊರಬೀಳುತ್ತದೆ. ಅವರು ಸಂಸ್ಕೃತಿಯ ವಿರೋಧಿಗಳಲ್ಲ. ಆದರೆ ಸಂಸ್ಕೃತಿಯನ್ನು ಜನಜೀವನದಿಂದ ಬೇರ್ಪಡಿಸುವ ಶೈಕ್ಷಣಿಕ ಹುಚ್ಚುತನವನ್ನು ಮಾತ್ರ ಅವರು ತಿರಸ್ಕರಿಸುತ್ತಾರೆ. ಈ ಶೈಕ್ಷಣಿಕ ಹುಚ್ಚುತನವು ಜನತೆಗೆ ಬಣ್ಣಿಸಲಸದಳವಾದ ಕೇಡನ್ನುಂಟುಮಾಡಿದೆ. ಪುರಾತನ ಗ್ರಂಥಗಳ ವಚನಗಳನ್ನು ಮುಖ್ಯವಾಗಿ ಮಾನಸಿಕ ಪರಿಶ್ರಮದ ಸಾಮುಗ್ರಿಯಂತೆ ಉಪಯೋಗಿಸುವ ಶಿಕ್ಷಕನಿಗಿಂತಲೂ ಅವುಗಳನ್ನು ಅಭ್ಯಾಸಪತ್ರಿಕೆಯಿಂದ ಸಂಪೂರ್ಣವಾಗಿ ತೆಗೆದು ಹಾಕುವ ಮನುಷ್ಯನು ಕಡಿಮೆ ಪಾಪಿಷ್ಠನೆಂದು ಹೇಳಬಹುದು. ವಿಜ್ಞಾನವನ್ನು ಕಲಿಸುವ ಇಂದಿನ ಶಿಕ್ಷಕನು ಸಹ ಪ್ರಾಚೀನ ಭಾಷೆಗಳನ್ನು ಕಲಿಸುವ ಶಿಕ್ಷಕನು ಮಾಡುವ ಪಾಪವನ್ನೇ ಎಷ್ಟೋ ಸಲ ಮಾಡುತ್ತಿರುತ್ತಾನೆ. ಅಭ್ಯಾಸಪತ್ರಿಕೆಯನ್ನು ಜನಸಾಮಾನ್ಯರು ಅಪರಿಪೂರ್ಣ ಜ್ಞಾನದಿಂದ ಟೀಕಿಸುತ್ತಿರಬಹುದು. ಆದರೆ ಅದು ಸದುದ್ದೇಶದಿಂದ ಹೊರಬೀಳುವುದರಿಂದ ಗಮನಾರ್ಹವಾಗಿದೆ. ಸಮಾಜಕ್ಕೆ

ಸಲ್ಲಿಸಬೇಕಾದ ಶಾಲೆಯ ನಿಜವಾದ ಸೇವೆಯ ಕಡೆಗೆ ಅದು ನಮ್ಮ ಲಕ್ಷ್ಯ ವನ್ನು ಸೆಳೆಯುತ್ತದೆ. ಶಾಲೆಯಲ್ಲಿ ಕಲಿಸಲ್ಪಡುವ ವಿಷಯವು ಜೀವನದ ಯಾವ ಕೊರತೆಯನ್ನು ಪೂರೈಸುತ್ತದೆಯೆಂಬುದರ ಕಡೆಗೆ ಅದು ನಮ್ಮ ದೃಷ್ಟಿಯನ್ನು ಹೊರಳಿಸುತ್ತದೆ.

ಪ್ರತಿಯೊಂದು ವಿಷಯದ ಉಪಯುಕ್ತತೆಯನ್ನು ಕಂಡುಹಿಡಿಯುವುದು ಅಷ್ಟೇನೂ ಸುಲಭವಾಗಿಲ್ಲ. ಗಣಿತದ ನಿದರ್ಶನವನ್ನು ಇಲ್ಲಿ ತೆಗೆದುಕೊಳ್ಳ ಬಹುದು. ಗಣಿತದ ಉಪಯುಕ್ತತೆಯನ್ನು ಪ್ರತಿಯೊಬ್ಬನೂ ಒಪ್ಪುತ್ತಾನೆ. ಅಂಕಿ ಸಂಖ್ಯೆಗಳ ಜ್ಞಾನ ಪ್ರತಿಯೊಬ್ಬನಿಗೂ ಕೆಲಮಟ್ಟಿಗೆ ಬೇಕೇ ಬೇಕು. ಲೆಕ್ಕಪತ್ರ ಮತ್ತು ಲಾಭಹಾನಿಗಳನ್ನು ಗೊತ್ತುಮಾಡಿಕೊಳ್ಳುವಷ್ಟು ಗಣಿತ ಪ್ರತಿಯೊಬ್ಬನಿಗೂ ಬರಲೇಬೇಕು. ಆದರೆ ಇದಕ್ಕಿಂತಲೂ ಹೆಚ್ಚಿನ ಗಣಿತ ಜ್ಞಾನ ಬಹುಜನರಿಗೆ ತಮ್ಮ ಜೀವನದಲ್ಲಿ ಅವಶ್ಯವಿರುವುದಿಲ್ಲ. ಅಂದಮೇಲೆ, ಭೂಮಿತಿ—ಬೀಜಗಣಿತ ಮೊದಲಾದ ವಿಷಯಗಳನ್ನು ಎಲ್ಲ ಬಾಲಕರೂ ಕಲಿಯುವುದು ಅಗತ್ಯವೆಂದು ತೋರಿಸಿಕೊಡುವುದು ಕಠಿಣ. ಇಲ್ಲಿ ಉಪ ಯುಕ್ತತೆಯ ಮಾನದಂಡವು ನಿರುಪಯುಕ್ತವೆನಿಸುವುದು.

## ೨. ಮಾನಸಿಕ ಪರಿಶ್ರಮದ ತತ್ವ

ಹೀಗೆ ಉಪಯುಕ್ತತೆಯ ಮಾನದಂಡವು ನಿರುಪಯುಕ್ತವೆನಿಸಿದಾಗ ಹಿಂದಿನಕಾಲದ ಶಿಕ್ಷಕನು ಈ ಕೆಳಗಿನ ವಾದವನ್ನು ಮುಂದೆ ಮಾಡುತ್ತಾನೆ:— "ಗಣಿತದಂತಹ ವಿಷಯಗಳು ಬಾಲಕನಿಗೆ ಪ್ರತ್ಯಕ್ಷವಾಗಿ ಉಪಯೋಗ ಬೀಳು ವುದಿಲ್ಲ. ಆದರೂ ಅವು ಅವನಿಗೆ ಮಾನಸಿಕ ಪರಿಶ್ರಮವನ್ನು ಒದಗಿಸುವವು. ಅದರಿಂದ ಅವನ ಬುದ್ಧಿಯು ಚುರುಕಾಗುವುದು. ಆದಕಾರಣ ಶಿಕ್ಷಕನು ಅನಾಸಕ್ತ ಬಾಲಕರಿಗೂ ಸಹ ಸಂಸ್ಕೃತ ಭಾಷಾಮೃತವನ್ನುಣಿಸಲು ಒತ್ತಾಯಪಡಿಸುವುದು ಯೋಗ್ಯ. ಹೀಗೆ ಒತ್ತಾಯದಿಂದ ಕಲಿತ ಸಂಸ್ಕೃತ ವನ್ನು ಬಾಲಕರು ಶಾಲೆಬಿಟ್ಟ ಮರುದಿನ ಮರೆತರೂ ಅಡ್ಡಿಯಿಲ್ಲ. ಅದರಿಂದ ಬಾಲಕರ ವಿಚಾರ ಸರಣಿ ಸುಧಾರಿಸುತ್ತದೆ. ಬೀಜಗಣಿತದ ಮಹಾ ಪ್ರಮೇಯಗಳನ್ನು ಬಿಡಿಸುವ ಕಾರ್ಯದಲ್ಲಿ ಇಚ್ಛೆಯಿಲ್ಲದ ಬಾಲಕರನ್ನು ಶಿಕ್ಷಕನು ಪರಿಶ್ರಮಿಸ ಹಚ್ಚಿಸುವುದು ಯೋಗ್ಯ. ಏಕೆಂದರೆ ಅದರಿಂದ

ಬಾಲಕರಲ್ಲಿ ಕಠಿಣ ಸಮಸ್ಯೆಗಳನ್ನೂ ಎದುರಿಸುವ ತಾಳ್ಮೆಯುಂಟಾಗುತ್ತದೆ." —ಎಂದು ಮೊದಲಾಗಿ ಹಿಂದಿನಕಾಲದ ಶಿಕ್ಷಕನು ಹೇಳುತ್ತಾನೆ. ಈ ವಾದಕ್ಕೆ ಒಪ್ಪಿದರೆ, ಬಹುದಿನಗಳಿಂದ ಶಿಕ್ಷಕನು ಕಲಿಸುತ್ತ ಬಂದ ಹಲವು ನಿರುಪಯುಕ್ತ ವಿಷಯಗಳನ್ನು ಇನ್ನು ಮುಂದೆಯೂ ಕಲಿಸುತ್ತ ಹೋಗಲು ಅವನಿಗೆ ಲಾಯಿಸೆನ್ಸ ಕೊಟ್ಟಹಾಗೆಯೇ ಸರಿ.

ಶಿಕ್ಷಕನ ಈ ಕುರುಡು ನಂಬಿಕೆಯು ಔಪಚಾರಿಕ ಶಿಕ್ಷಣವೆಂಬ ಹೆಸರಿನಿಂದ ಪ್ರಸಿದ್ಧವಿದೆ. "ಮನಸ್ಸು ವಿವಿಧ ಶಕ್ತಿಗಳಿಂದ ಕೂಡಿದ ಒಂದು ಗಂಟು. ತರ್ಕಶಕ್ತಿ, ಪ್ರತಿಭಾಶಕ್ತಿ, ಕಲ್ಪನಾಶಕ್ತಿ, ನೆನಪಿನಶಕ್ತಿ, ಗ್ರಾಹಕಶಕ್ತಿ, ನಿರೀಕ್ಷಣಶಕ್ತಿ ಮೊದಲಾದ ಮಾನಸಿಕ ಶಕ್ತಿಗಳಿಗೆ ಪ್ರತ್ಯೇಕವಾಗಿ ಶಿಕ್ಷಣ ಕೊಡುವುದು ಸಾಧ್ಯ. ಗಣಿತದಿಂದ ತರ್ಕಶಕ್ತಿ ಹೆಚ್ಚುತ್ತದೆ. ಕಾವ್ಯದಿಂದ ಪ್ರತಿಭಾಶಕ್ತಿ ಹೆಚ್ಚುತ್ತದೆ. ವ್ಯಾಕರಣ ನಿಯಮಗಳನ್ನು ಪಾಠ ಮಾಡುವುದರಿಂದ ನೆನಪಿನಶಕ್ತಿ ಹೆಚ್ಚುತ್ತದೆ. ಹೀಗೆ ಮನಸ್ಸಿನ ಒಂದೊಂದು ಶಕ್ತಿಯನ್ನು ಪುಷ್ಟಿಗೊಳಿಸುವುದು ಶಿಕ್ಷಣದ ಮರ್ಮ" —ಎಂದು ಔಪಚಾರಿಕ ಶಿಕ್ಷಣ ತತ್ತ್ವವು ಸಾರುತ್ತದೆ. ಆದರೆ ಈ ತತ್ತ್ವವನ್ನು ಆಧುನಿಕ ಮಾನಸಶಾಸ್ತ್ರವು ಅಲ್ಲಗಳೆದಿದೆ. ಮನಸ್ಸು ವಿಂಗಡಿಸಲು ಅಶಕ್ಯವಾದ ವಸ್ತುವೆಂದು ಪ್ರಯೋಗಗಳಿಂದ ಸಿದ್ಧಪಡಿಸಿದೆ. ಆದರೂ ಈ ಔಪಚಾರಿಕ ಶಿಕ್ಷಣವು ಶಿಕ್ಷಣ ಪ್ರಪಂಚದಲ್ಲಿ ಅಲ್ಪಸ್ವಲ್ಪ ಯಶಸ್ಸು ದೊರಕಿಸಿದೆ. ಹಾಗಾದರೆ ಈ ಯಶಸ್ಸಿಗೆ ಯಾವ ಸತ್ಯಾಂಶದ ಬೆಂಬಲವಿದೆ ?

## ೩. ಅಭ್ಯಾಸದಲ್ಲಿ ಅಡಕವಾದ ಶಿಸ್ತು

ಹಿಂದೆ ವಿವರಿಸಿದ ಶಿಸ್ತು ಎಂಬ ವಿಚಾರದಲ್ಲಿ ಈ ಪ್ರಶ್ನೆಯ ಉತ್ತರವು ಅಡಗಿದೆ. "ಗಣಿತ, ವಿಜ್ಞಾನ, ಸಾಹಿತ್ಯ ಮೊದಲಾದ ಶಾಲೆಯ ಅಭ್ಯಾಸಗಳಿಂದ ದೊರೆಯುವ ಶಿಸ್ತಿನಲ್ಲಿ ಯಾವಾಗಲೂ ಒಂದು ಪರಿಪೂರ್ಣತೆಯನ್ನು ಪಡೆದ ಮಾನಸಿಕ ಸಂಘಟನೆಯು ಬೇರೊಂದು ಅಪರಿಪೂರ್ಣ ಮಾನಸಿಕ ಸಂಘಟನೆಯಮೇಲೆ ಪ್ರಭುತ್ವವನ್ನು ಪ್ರಸ್ಥಾಪಿಸುತ್ತಿರುವ ಸಂಗತಿಯು ಕಂಡುಬರುತ್ತದೆ." —ಎಂದು ಹಿಂದೆಯೇ ವಿವರಿಸಲಾಗಿದೆ. ಗಣಿತ ಶಾಸ್ತ್ರದ ನಿದರ್ಶನವನ್ನು ಇಲ್ಲಿ ಪುನಃ ತೆಗೆದುಕೊಳ್ಳಬಹುದು. ಆ ವಿಷಯವು ಅನೇಕ ಶತಮಾನಗಳಿಂದ ಒಂದು ವಿಶಿಷ್ಟಬಗೆಯ ಸಮಸ್ಯೆಗಳ ಕಡೆಗೆ ಹೊರ

ಳಿಸಿದ ಮಾನವನ ಬುದ್ಧಿಬಲದ ಚಟುವಟಿಕೆಗಳ ಪರಂಪರೆಯನ್ನು ಪ್ರತಿ ನಿಧಿಸುತ್ತದೆ. ತಲೆ ತಲಾಂತರಗಳಿಂದ ಮೇಧಾವಿಗಳು ಅಂತಹ ಸಮಸ್ಯೆ ಗಳನ್ನು ಅಭ್ಯಾಸಮಾಡುತ್ತ ಬಂದಿದ್ದಾರೆ. ತಮ್ಮ ಹಿಂದಿನವರು ಬಿಟ್ಟು ಹೋದ ಸಿದ್ಧಾಂತಗಳನ್ನು ಮತ್ತು ರೀತಿಗಳನ್ನು ಹಲವು ಸಲ ಒಪ್ಪಿದ್ದಾರೆ; ಕೆಲವು ಸಲ ತಿದ್ದಿದ್ದಾರೆ; ಎಷ್ಟೋಸಲ ಅವುಗಳನ್ನು ವಿಸ್ತೃತಗೊಳಿಸಿದ್ದಾರೆ. ಅವರು ತಮ್ಮ ಪರಿಶ್ರಮದ ಫಲಗಳನ್ನು ಮುಂದಿನ ಪೀಳಿಗೆಯವರಿಗೆ ಬಿಟ್ಟು ಹೋಗಿದ್ದಾರೆ. ಈ ಮುಂದಿನ ಪೀಳಿಗೆಯವರು ಸಹ ತಮ್ಮ ಹಿಂದಿನವರ ಸಿದ್ಧಾಂತಗಳನ್ನು ಮತ್ತು ರೀತಿಗಳನ್ನು ಒಪ್ಪಿಕೊಳ್ಳಬಹುದು, ತಿದ್ದಬಹುದು, ಇಲ್ಲವೆ ವಿಸ್ತೃತಗೊಳಿಸಬಹುದು. ಹೀಗೆ ಗಣಿತಶಾಸ್ತ್ರದ ಹಿಂದೆ ಒಂದು ವಿಶಿಷ್ಟಬಗೆಯ ಬೌದ್ಧಿಕ ಚಟುವಟಿಕೆಯ ಪರಂಪರೆಯು ಬೆಳೆದುಬಂದಿದೆ. ಈ ಪರಂಪರೆಗೆ ತನ್ನದೇ ಆದ ಒಂದು ವ್ಯಕ್ತಿತ್ವವಿದೆ; ತನ್ನದೇ ಆದ ಒಂದು ಆದರ್ಶವಿದೆ. ಇಂತಹ ಒಂದು ವಿಷಯದ ಪರಂಪರೆಯಲ್ಲಿ ತನ್ಮಯನಾದ ವಿದ್ಯಾರ್ಥಿಯು ಸಹ ಅದರ ಆದರ್ಶವನ್ನು ತನ್ನದನ್ನಾಗಿ ಮಾಡಿಕೊಳ್ಳು ತ್ತಾನೆ. ಆ ವಿಷಯದ ವಿಚಾರಗಳು, ಮಾನಸಿಕ ರೂಢಿಗಳು ಮತ್ತು ಅದಕ್ಕೆ ಸಲ್ಲುವ ಬುದ್ಧಿಮತ್ತೆ ಮೊದಲಾದವುಗಳು ಅವನ ಸ್ವಭಾವದಲ್ಲಿ ನಾಟು ತ್ತವೆ. ಆ ವಿಷಯದ ಸಂಗತಿಗಳನ್ನು ಹೋಲುವ ಪ್ರಸಂಗಗಳು ತನ್ನ ಜೀವನ ದಲ್ಲಿ ಒದಗಿದಾಗ ಅವನು ನಿಶ್ಚಯವಾಗಿ ಅದರ ಪರಂಪರೆಯ ರೀತಿ ನೀತಿ ಗಳನ್ನೇ ಬಳಸಿಕೊಳ್ಳುವನು. ಇಲ್ಲಿ ಒಬ್ಬ ವಕೀಲನ ನಿದರ್ಶನವನ್ನು ತೆಗೆದು ಕೊಳ್ಳಬಹುದು. ಯಾವುದೇ ನಿಯಮಗಳ ಇಲ್ಲವೆ ಸಾಕ್ಷಿ ಪುರಾವೆಗಳ ಬೆಲೆ ಯನ್ನು ನಿರ್ಧರಿಸುವ ಪ್ರಸಂಗವು ಅವನಿಗೆ ಒದಗಿದರೆ ಅವನು ತನ್ನ ಕಾಯ್ದೆಯ ಶಿಕ್ಷಣ ಪರಂಪರೆಯ ರೀತಿ ನೀತಿಗಳನ್ನು ಸಹಜವಾಗಿ ಬಳಸಿ ಕೊಳ್ಳುತ್ತಾನೆ. ಸಾಮ್ರಾಟ ಅಶೋಕನು ಬೌದ್ಧ ಧರ್ಮದ ನೈತಿಕ ನಿಯಮಗಳನ್ನು ಸಹ ಸಾಮ್ರಾಟನಿಗೆ ಒಪ್ಪುವ ವಾಣಿಯಲ್ಲಿಯೇ ಬೋಧಿಸಿದ್ದಾನೆ. ಅಂದಮೇಲೆ, ಆಯಾ ವಿಷಯಗಳ ಅಭ್ಯಾಸದ ಫಲ ವಾಗಿ ಬಾಲಕರಲ್ಲಿ ಆಯಾ ವಿಷಯಗಳಿಗೆ ಸಹಜವಾದ ಮಾನಸಿಕ ರೂಢಿ ಗಳು ಮತ್ತು ದೃಷ್ಟಿಕೋನಗಳು ಉಂಟಾಗುವುದರಲ್ಲಿ ಯಾವ ಸಂದೇ ಹವೂ ಇಲ್ಲ.

ಮಾನವನ ವಿಚಾರ ಪರಂಪರೆಗಳ ಇತಿಹಾಸವು ಸಹ ಇದೇ ಸಿದ್ಧಾಂತ ವನ್ನೇ ಪುಷ್ಟೀಕರಿಸುತ್ತದೆ. ಗುರುತ್ವಾಕರ್ಷಣದ ವಿಚಾರದಲ್ಲಿ ಮಗ್ನನಾದ ನ್ಯೂಟನ್ ಮಹಾಶಯನು ನಕ್ಷತ್ರ ಸೃಷ್ಟಿಯ ಸಮಸ್ಯೆಗಳನ್ನು ಸಹ ಅದೇ ವಿಚಾರಸರಣಿಯಿಂದ ಬಿಡಿಸಲು ಪ್ರಯತ್ನಿಸಿದನು; ಆಧುನಿಕ ಭೌತಿಕ ಶಾಸ್ತ್ರದ ಮೊದಲ ತತ್ವಗಳನ್ನು ಸಹ ಅದೇ ವಿಚಾರಸರಣಿಯ ತತ್ವದಮೇಲೆ ರೂಪಿಸಿ ದನು. ಇಷ್ಟೇ ಅಲ್ಲ, ನ್ಯೂಟನ್ನನ ಪರಂಪರೆಯಲ್ಲಿ ಬೆಳೆದ ೧೮ನೆಯ ಶತಮಾನದ ವೈಜ್ಞಾನಿಕರೂ ರಾಜಕಾರಣಿಗಳೂ ಸಮಾಜ ಸುಧಾರಕರೂ ಸಹ ಅದೇ ವಿಚಾರ ಸರಣಿಯನ್ನೇ ತಮ್ಮ ವಿವಿಧ ರಂಗಗಳಲ್ಲಿ ಬಳಸಿಕೊಂಡಿದ್ದಾರೆ. ಹೀಗೆಯೇ ಡಾರ್ವಿನ ಮಹಾಶಯನ ಪರಂಪರೆಯಲ್ಲಿ ಸುರಿತ ೧೯ನೆಯ ಶತಮಾನದ ಮೇಧಾವಿಗಳು ಡಾರ್ವಿನ್ನರ ಪ್ರಾಣಿ ಜೀವನ ಪ್ರಗತಿಯ ವಿಶಿಷ್ಟ ವಿಚಾರಗಳನ್ನೇ ತಮ್ಮ ತಮ್ಮ ಜೀವನರಂಗಗಳಲ್ಲಿ ಬಳಸಿಕೊಂಡಿದ್ದಾರೆ. ಇಂದು ಪ್ರೊಫೆಸರ ಆಯಿನ್‌ಸ್ಟೀನ ಎಂಬವರ 'ಪರಸ್ಪರ ಸಂಬಂಧಾತ್ಮಕ ಭೌತಿಕ ಶಾಸ್ತ್ರದ ತತ್ವ ಸರಣಿಯಲ್ಲಿ ಸುರಿತ ವಿವಿಧ ರಂಗದ ತಜ್ಞರು ಅದೇ ತತ್ವಸರಣಿಯನ್ನೇ ಬಳಸಿ ಕೊಳ್ಳುತ್ತಿದ್ದಾರೆಂದು ಹೇಳಿದರೆ ಅತಿಶಯೋಕ್ತಿಯೆನಿಸದು. ಈ ಸಂಗತಿಗಳ ಆಧಾರದಮೇಲೆ ದೊರೆಯುವ ಸಿದ್ಧಾಂತವಾವುದು ? ಒಂದು ವಿಷಯದ ಅಭ್ಯಾ ಸಕ್ಕೆ ಸಂಬಂಧಪಟ್ಟ ರೀತಿ ನೀತಿಗಳನ್ನು ಒಬ್ಬನು ಅರಗಿಸಿಕೊಂಡರೆ, ಆ ವಿಷ ಯದ ಸಂಗತಿಗಳನ್ನು ಹೋಲುವ ಇತರ ಸಂದರ್ಭಗಳಲ್ಲಿ ಸಹ ಅವೇ ರೀತಿ ನೀತಿಗಳನ್ನು ಅವನು ಉಪಯೋಗಿಸಬಲ್ಲನು. ಒಂದು ವಿಷಯದ ಅಭ್ಯಾಸ ದಿಂದ ದೊರೆಯುವ ಶಿಕ್ಷಣದ ಮರ್ಮ ಇದೇ. ಇದರ ಜೊತೆಗೆ ಮಾನಸಿಕ ಬೆಳವಣಿಗೆಯ ಸಂಗತಿಗಳನ್ನು ಸಹ ಜೋಡಿಸಬೇಕು.

ಒಬ್ಬನ ಮನಸ್ಸಿನಲ್ಲಿ ಒಂದು ವಸ್ತುವಿನ ಬಗ್ಗೆ ಬಲವಾದ ಭಾವನೆಯು ಕೇಂದ್ರೀಕೃತವಾಗಿದ್ದರೆ, ಮುಂದೆ ಆ ಭಾವನೆಯನ್ನು ಪ್ರಚೋದಿಸುವಂತಹ ಪ್ರಸಂಗವು ಒದಗಿದಾಗ ಅದನ್ನೆದುರಿಸಲು ಇಡೀ ಮಾನಸಿಕ ಬಲವೇ ಸಹಾ ಯಕವಾಗುವುದು. ಏಕೆಂದರೆ, ಮೂಲ ಭಾವನೆಗೆ ಪೋಷಕವಾಗುವ ಇತರ ಭಾವನೆಗಳೂ ಸಹ ಪ್ರಸಂಗಾನುಸಾರ ಉದಯವಾಗುತ್ತವೆ. ಸಣ್ಣವರಿರು ವಾಗ ಮನೆಯ ಸಾಕುಪ್ರಾಣಿಗಳನ್ನು ಮಮತೆಯಿಂದ ನಡೆಸಿಕೊಳ್ಳುತ್ತಿದ್ದರೆ, ಮುಂದೆ ದೊಡ್ಡವರಾದಾಗ ಅವೇ ಮಮತೆಯ ಭಾವನೆಗಳು ಇತರ ಜನರ

ಸಂಗಡ ನಡೆದುಕೊಳ್ಳುವ ರೀತಿಯಲ್ಲಿ ಕಾಣಿಸಿಕೊಳ್ಳಬಹುದು. ಹೀಗೆ ಶಾಲೆಯ ಅಭ್ಯಾಸಗಳಿಂದ ಬಾಲಕರಲ್ಲಿ ಬೆಳೆಯುವ ನಿರ್ವಿಕಾರ ಪರಿಶ್ರಮದ ಆದರ್ಶ ಭಾವನೆಗಳು ಅವರ ಮುಂದಿನ ಜೀವನದ ಯಶಸ್ಸಿಗೆ ಕಾರಣವಾಗುತ್ತವೆ. ಔಪಚಾರಿಕ ಶಿಕ್ಷಣದ ಪ್ರವರ್ತಕರು ಶಾಲೆಯ ಅಭ್ಯಾಸದ ವಿಷಯಗಳ ಈ ಮಹತ್ವವನ್ನು ಸರಿಯಾಗಿ ಅರ್ಥಮಾಡಿಕೊಂಡಿಲ್ಲ. ಆದರೆ ಅವರ ಕುರುಡು ಆಚರಣೆಯು ಸ್ಥೂಲವಾಗಿ ಮೇಲೆ ಹೇಳಿದಂತಹ ಯಶಸ್ಸನ್ನೇ ಸಾಧಿಸಿದೆಯೆನ್ನಬಹುದು.

## ೪. ಅಭ್ಯಾಸದ ವಿಷಯಗಳು

ಈಗ ಅಭ್ಯಾಸಪತ್ರಿಕೆಯ ತಾತ್ವಿಕ ರೂಪರೇಷೆಯು ಸಿದ್ಧವಾದಂತಾಗಿದೆ. ಶಾಲೆಯು ಕೇವಲ ಜ್ಞಾನಾರ್ಜನೆಯ ಸ್ಥಳವಲ್ಲ; ಅದು ಕೆಲವೊಂದು ಚಟುವಟಿಕೆಗಳಲ್ಲಿ ಬಾಲಕರನ್ನು ತರಬೇತುಗೊಳಿಸಿ ಶಿಸ್ತುಶೀಲರನ್ನಾಗಿ ಮಾಡುವ ಸ್ಥಳ. ಅಲ್ಲಿ ಕಲಿಸಲ್ಪಡುವ ಚಟುವಟಿಕೆಗಳಿಗೆ ಬಾಹ್ಯ ಜಗತ್ತಿನಲ್ಲಿ ಶಾಶ್ವತವಾದ ಮತ್ತು ಮಹತ್ತರವಾದ ಬೆಲೆಯಿರಬೇಕು. ಅಂತಹ ಚಟುವಟಿಕೆಗಳು ಎರಡು ಪ್ರಕಾರದವಿವೆ: ವೈಯಕ್ತಿಕ ಮತ್ತು ಸಾಮಾಜಿಕ. ಜೀವನದ ಸ್ಥಿತಿಗತಿಗಳನ್ನು ಕಾಪಾಡಿಕೊಳ್ಳುವ ಚಟುವಟಿಕೆಗಳು ಮೊದಲನೆಯ ವರ್ಗಕ್ಕೆ ಸೇರುತ್ತವೆ. ದೇಹಾರೋಗ್ಯ, ದೇಹ ಸೌಂದರ್ಯ, ಸಾಮಾಜಿಕ ಸಂಸ್ಥೆ, ನೀತಿ, ಧರ್ಮ ಮೊದಲಾದವುಗಳನ್ನು ರಕ್ಷಿಸುವ ನಡತೆಗಳು ಈ ವರ್ಗಕ್ಕೆ ಸೇರಿದ ಮುಖ್ಯ ಚಟುವಟಿಕೆಗಳು. ನಾಗರಿಕ ಜೀವನದ ಸಂಜೀವಿನಿಯಂತಿರುವ ಮಾನವನ ನಿರ್ಮಾಪಕ ಚಟುವಟಿಕೆಗಳು ಎರಡನೆಯ ವರ್ಗದಲ್ಲಿ ಸೇರುತ್ತವೆ. ಅವು ವಿಜ್ಞಾನ ಮತ್ತು ಕಲೆಯೆಂಬ ರೂಪಗಳಲ್ಲಿ ಎಲ್ಲರಿಗೂ ಪರಿಚಿತವಿವೆ. ವಿಜ್ಞಾನ ಮತ್ತು ಕಲೆಗಳು ಶಾಲೆಯ ಅಭ್ಯಾಸಪತ್ರಿಕೆಯಿಂದ ಮಾಯವಾದರೆ ನಾಗರಿಕತೆಗೆ ಅದೆಂತಹ ಹಾನಿಯೊದಗಬಹುದು! ಕಾದಂಬರಿಕಾರನು ಕಲ್ಪನೆಯ ಝುರಿಯನ್ನು ಹರಿಸದೆ ಹೋದರೆ, ಕವಿಯು ಕವನ ಕಟ್ಟುವುದನ್ನು ಮರೆತರೆ, ಕನ್ನಯ್ಯನು ಕೊಳಲು ನುಡಿಸದಿದ್ದರೆ, ಶಿಲ್ಪಿಯ ಕೈಯು ತನ್ನ ಜಾಣ್ಮೆಯನ್ನು ಕಳೆದುಕೊಂಡರೆ, ಈ ಜಗತ್ತು ಅದೆಷ್ಟು ಬಡವಾದೀತು! ಶಾಲೆಯ ಅಭ್ಯಾಸಪತ್ರಿಕೆಯಲ್ಲಿ ಈ ಎಲ್ಲ ಮಹತ್ವದ ಚಟುವಟಿಕೆಗಳಿಗೂ ಸ್ಥಾನವಿರಬೇಕು. ಕೆಳಗಿನ ವರ್ಗಗಳಲ್ಲಿ ವಿಷಯಗಳ ಸರಳ

ನಿರೂಪಣೆಯಿರಬೇಕು. ಮೇಲಿನ ವರ್ಗಗಳಲ್ಲಿ ವಿಷಯಗಳ ಪೂರ್ಣ ಪರಿ ಶೀಲನೆಯಿರಬೇಕು.

## ೫. ವಿಜ್ಞಾನ ಮತ್ತು ಕಲೆ

ವಿಜ್ಞಾನ ಮತ್ತು ಕಲೆಗಳು ಮಾನವನ ನಿರ್ಮಾಪಕ ಚೈತನ್ಯದಿಂದ ಹೊರಹೊಮ್ಮಿದ ಭವ್ಯ ರೂಪಗಳು. ನಾಗರಿಕ ಜೀವನದ ಪ್ರಗತಿಯು ಸುಗಮವಾಗಿ ಮುಂದುವರಿಯಬೇಕಾದರೆ ಈ ಚಟುವಟಿಕೆಗಳನ್ನು ಪ್ರತಿಯೊಂದು ಜನಾಂಗವೂ ಕೈಕೊಂಡು ವೃದ್ಧಿಗೊಳಿಸತಕ್ಕದ್ದು. ವಿಜ್ಞಾನ ಮತ್ತು ಕಲೆಗಳು ಮಾನವನು ಬಾಹ್ಯ ಜಗತ್ತಿನ ಸಂಗಡ ವ್ಯವಹರಿಸುವ ಎರಡು ವಿಧಾನಗಳು. ಇವುಗಳಲ್ಲಿ ಮನುಷ್ಯನ ದೈಹಿಕ–ಮಾನಸಿಕ ಗುಣಧರ್ಮಗಳಲ್ಲದೆ ಅವನ ಶಬ್ದ ಸಂಪತ್ತಿ ಮತ್ತು ಸಂಗೀತಗಳು ಸಹ ಅಡಕವಾಗಿವೆ. ಮನುಷ್ಯನ ಈ ಚಟುವಟಿಕೆಗಳು ವಿಶ್ವದ ಮೇಲಿನ ಪ್ರಭುತ್ವಕ್ಕಾಗಿ ಹೆಣಗುತ್ತವೆ. ವಿಜ್ಞಾನವೆಂದರೆ ಭೌತಿಕ ವಸ್ತುಗಳ ನಿಜವಾದ ಗುಣಧರ್ಮಗಳ ಆಧಾರದ ಮೇಲೆ ವಿಶ್ವದ ಜ್ಞಾನವನ್ನಾಗಲಿ ಇಲ್ಲವೆ ವಿಶ್ವದ ಮೇಲಿನ ಪ್ರಭುತ್ವವನ್ನಾಗಲಿ ಸಾಧಿಸಲು ಮಾಡಿದ ಪ್ರಯತ್ನ. ಕಲೆಯೆಂದರೆ ಭೌತಿಕ ವಸ್ತುಗಳ ಪರಿಚಯವನ್ನು ತನ್ನ ಮಾನಸಿಕ ತೃಪ್ತಿಗಾಗಿ ಬೇಕಾದ ಹಾಗೆ ಬಳಸಿಕೊಳ್ಳುವ ಪ್ರಯತ್ನ.

ಅಭ್ಯಾಸಪತ್ರಿಕೆಯಲ್ಲಿ ವಿಜ್ಞಾನಕ್ಕಿಂತಲೂ ಕಲೆಗೆ ಹೆಚ್ಚು ಮಹತ್ವದ ಸ್ಥಾನ ಕೊಡಬೇಕೆಂದು ಕೆಲವರು ಹೇಳುತ್ತಾರೆ. ಸೌಂದರ್ಯದ ಬಗ್ಗೆ ಅಭಿರುಚಿಯನ್ನು ಹುಟ್ಟಿಸುವಂತಹ ವಿಷಯಗಳು ಮನುಷ್ಯನ ಮನೋವಿಕಾರಗಳನ್ನು ನಿರ್ಮಲಗೊಳಿಸುತ್ತವೆ. ಮನೋವಿಕಾರಗಳು ಮನುಷ್ಯ ಜೀವನದ ಸ್ವಾರಸ್ಯವನ್ನು ಹೆಚ್ಚಿಸುವ ಗುಣಧರ್ಮಗಳು. ಕಾವ್ಯ, ಸಂಗೀತ, ಅದ್ಭುತ ರಮ್ಯ ಕಾದಂಬರಿ, ಪ್ರಣಯ ಪ್ರಾಧಾನ್ಯ ನಾಟಕ, ಕಲಾಕೌಶಲ್ಯ ಮೊದಲಾದವುಗಳಲ್ಲಿ ಕಂಡುಬರುವ ಸೌಂದರ್ಯವನ್ನು ನೋಡಿ ತಣಿಯುವ ಕಾರ್ಯವು ಮಾನವೀಯತೆಯನ್ನು ಹೆಚ್ಚಿಸುತ್ತದೆ. ಸೌಂದರ್ಯೋಪಾಸನೆಯು ಮನುಷ್ಯನ ಅನುಭವಮಂಟಪದ ಭವ್ಯ ದೃಶ್ಯಗಳನ್ನು ತೋರಿಸುವ ಮಂದಿರದ ಹೆಬ್ಬಾಗಿಲನ್ನು ತೆರೆಯುತ್ತದೆ; ಮಾನವನಲ್ಲಿ ಕಾಡಾವಸ್ಥೆಯಿಂದ ಬೆಳೆದು ಬಂದಿರುವ ಮನೋವಿಕಾರಗಳ ಒರಟುತನವನ್ನು ಅದು ಕಡಿಮೆ

ಮಾಡುತ್ತದೆ; ಮನುಷ್ಯರನ್ನು ನಿರ್ಮಲಾಂತಃಕರುಣಿಗಳನ್ನಾಗಿ ಮಾಡು ತ್ತದೆ. ಈ ಮಾತು ನಿಜ. ಆದರೆ ಕಲೆಯು ಮಾಡಬಲ್ಲ ಈ ಕಾರ್ಯವನ್ನು ವಿಜ್ಞಾನವು ಮಾಡಲಾರದು ಎಂದು ತಿಳಿಯುವುದು ತಪ್ಪು. ವೈಜ್ಞಾನಿಕ ವಿಷಯಗಳನ್ನು ಕಲಿಸುವಾಗ ಅವುಗಳಿಂದ ದೊರೆಯಬಹುದಾದ ಮಹಾನಂದದ ಕಡೆಗೆ ಬಾಲಕರ ದೃಷ್ಟಿಯನ್ನು ಹೊರಳಿಸದೆ ಇರುವುದು ಇಂದಿನ ಶಿಕ್ಷಣದ ಮಹಾದೋಷ. ವಿಜ್ಞಾನದಲ್ಲಿ ಮನುಷ್ಯನ ಜೀವನ ಚಟುವಟಿಕೆಯು ನಿಸರ್ಗದ ಮೇಲೆ ತನ್ನ ಬೌದ್ಧಿಕ ಪ್ರಭುತ್ವವನ್ನು ಪ್ರಸ್ಥಾಪಿಸಲು ಪ್ರಯತ್ನಪಡುತ್ತದೆ; ಅದು ನಕ್ಷತ್ರ ಪ್ರಪಂಚದಿಂದ ಹಿಡಿದು ಅಣುವಿನ ಗುಟ್ಟಿನವರೆಗಿನ ಎಲ್ಲ ನೈಸರ್ಗಿಕ ವಸ್ತುಗಳ ಮರ್ಮವನ್ನರಿಯದೆ ತೃಪ್ತಿಹೊಂದುವುದಿಲ್ಲ; ಅದು ಪ್ರತಿಯೊಂದು ವಸ್ತುವಿನ ಭೂತ ಭವಿಷ್ಯಗಳ ಜ್ಞಾನವನ್ನು ಮಾಡಿಕೊಳ್ಳದೆ ವಿಶ್ರಮಿಸುವುದಿಲ್ಲ. ನ್ಯೂಟನ್, ಡಾರ್ವಿನ್, ಆಯಿನ್‌ಸ್ಟೀನ ಮತ್ತು ರಾಮನ್ನರಂತಹ ಮಹನೀಯರು ನಡೆಯಿಸಿದ ಸಂಶೋಧನೆಗಳು ವಾಸ್ತವಿಕತೆಗೆ ಹೊಂದಿಕೊಂಡಿದ್ದರೂ ಸಹ ಅವುಗಳಲ್ಲಿಯೂ ಕಲಾಪೂರ್ಣ ವಸ್ತುಗಳಿಗಿರುವ ರಮ್ಯತೆಯು ಅಡಕವಾಗಿದೆ ಯೆಂದರೆ ತಪ್ಪಾಗದು. ಆದುದರಿಂದ, ಅಭ್ಯಾಸಪತ್ರಿಕೆಯಲ್ಲಿ ಕಲೆಗಿರುವಷ್ಟು ಮಹತ್ವವು ವಿಜ್ಞಾನಕ್ಕೂ ಇರತಕ್ಕದ್ದು.

ವಿಜ್ಞಾನ ಮತ್ತು ಕಲೆಗಳಿಗೆ ಸಂಬಂಧಪಟ್ಟ ವಿಷಯಗಳಾವವು ? ಉತ್ತಮ ಸಾಹಿತ್ಯವು ಪ್ರಥಮ ಸ್ಥಾನವನ್ನಲಂಕರಿಸುತ್ತದೆ. ಮಾತೃಭಾಷೆ ಯಲ್ಲಿಯ ಉತ್ತಮ ಸಾಹಿತ್ಯ ದರ್ಶನ ಬಾಲಕರಿಗೆ ದೊರೆಯಬೇಕು. ವಿವಿಧ ಕಲೆಗಳನ್ನು ಬಾಲಕರು ಕಲಿತುಕೊಳ್ಳಬೇಕು. ಅವುಗಳಲ್ಲಿ ವಿಶ್ವಕಲೆಯಾದ ಸಂಗೀತ ಕಲೆಗೆ ಪ್ರಾಧಾನ್ಯತೆಯಿರಬೇಕು. ವಿಜ್ಞಾನದಲ್ಲಿ ಗಣಿತ ಶಾಸ್ತ್ರವು ಮುಖ್ಯ. ಭೌತಿಕ ಶಾಸ್ತ್ರ, ರಸಾಯನ ಶಾಸ್ತ್ರ, ಜೀವನ ಶಾಸ್ತ್ರ, ನಕ್ಷತ್ರ ಶಾಸ್ತ್ರ, ಸಮಾಜ ಶಾಸ್ತ್ರ, ಮಾನಸ ಶಾಸ್ತ್ರ ಮೊದಲಾದವುಗಳ ಪ್ರಥಮ ಪರಿಚಯ ಬಾಲಕರಿಗೆ ಆಗಬೇಕು. ಇತಿಹಾಸ–ಭೂಗೋಲಗಳು ಅಭ್ಯಾಸ ಪತ್ರಿಕೆಯ ಮಧ್ಯಭಾಗವನ್ನಾಕ್ರಮಿಸುತ್ತವೆ. ಇತಿಹಾಸವು ಸಾಹಿತ್ಯದ ಕಡೆಗೆ ಹೆಚ್ಚು ಒಲಿದಿದೆ. ಭೂಗೋಲವು ವಿಜ್ಞಾನದ ಕಡೆಗೆ ಹೆಚ್ಚು ಒಲಿದಿದೆ. ಈ ಎರಡೂ ವಿಷಯಗಳು ಮನುಷ್ಯನ ಪ್ರಗತಿಯ ಮತ್ತು ಇರುವಿಕೆಯ ಗುಟ್ಟನ್ನು ತಿಳಿಸುತ್ತವೆ. ಇತಿಹಾಸವು ಹಿಂದಿನ ಜೀವನದ ಸಂಗಡ ಇಂದಿನ

ಜೀವನವು ಹೇಗೆ ಹೊಂದಿಕೊಂಡಿದೆಯೆಂಬುವನ್ನು ತೋರಿಸುತ್ತದೆ. ಭೂಗೋಲವು ಮನುಷ್ಯ ಜೀವನವು ಹೇಗೆ ನೈಸರ್ಗಿಕ ಸ್ಥಿತಿಗತಿಗಳ ಮೇಲೆ ಅವಲಂಬಿಸಿದೆ ಮತ್ತು ಬೇರೆ ಬೇರೆ ಜನಾಂಗಗಳು ಪರಸ್ಪರ ಅವಲಂಬಿತವಾಗಿ ಹೇಗೆ ಜೀವಿಸುತ್ತವೆಯೆಂಬುವನ್ನು ತೋರಿಸುತ್ತದೆ.

## ೬. ಇತರ ವಿಷಯುಗಳು

ದೇಹಾರೋಗ್ಯ, ದೇಹಸೌಂದರ್ಯ, ಸಾಮಾಜಿಕ ನಡತೆ, ನೀತಿ, ಧರ್ಮ ಮೊದಲಾದ ವಿಷಯುಗಳನ್ನು ಪುಸ್ತಕ ಪಾಠಗಳ ರೂಪದಿಂದ ಕಲಿಸಲು ಬರುವುದಿಲ್ಲ. ವಿಜ್ಞಾನ ಮತ್ತು ಕಲೆಗಳಿಗೆ ಸಂಬಂಧಿಸಿದ ವಿಷಯಗಳನ್ನು ಹೇಳಿ ಕೊಡುವಾಗ ವಿದ್ಯಾರ್ಥಿಗಳಿಗೆ ದೇಹಾರೋಗ್ಯ ಮತ್ತು ದೇಹಸೌಂದರ್ಯಗಳ ಬಗ್ಗೆ ಸರಿಯಾದ ಕಲ್ಪನೆ ಮಾಡಿಕೊಡಬೇಕು. ಕವಾಯತು, ವ್ಯಾಯಾಮ, ಆಟ, ನೃತ್ಯ, ಗಾಯನ, ಭಾಷಣ ಮೊದಲಾದವುಗಳನ್ನು ರೂಢಿಮಾಡಿಕೊಳ್ಳುವಾಗ ಬಾಲಕರು ದೇಹಾರೋಗ್ಯ ಮತ್ತು ದೇಹಸೌಂದರ್ಯಗಳ ನಿಯಮಗಳನ್ನು ತಾನಾಗಿಯೇ ಕಲಿತುಕೊಳ್ಳಬಲ್ಲರು. ಬಾಲಕರು ಶಾಲೆಯ ನಾಗರಿಕರಾಗಿ ವರ್ತಿಸುವಾಗ ರಾಜಕೀಯ ಮತ್ತು ಸಾಮಾಜಿಕ ಸಂಸ್ಥೆಗಳ ರೀತಿ ನೀತಿಗಳನ್ನು ಕಲಿತುಕೊಳ್ಳುವರು. ಇತಿಹಾಸ—ಭೂಗೋಲಗಳನ್ನು ಓದುವಾಗ ಅವರು ಅವುಗಳ ಜ್ಞಾನವನ್ನು ಅಪರೋಕ್ಷವಾಗಿ ಪಡೆದುಕೊಳ್ಳಬಲ್ಲರು.

## ೭. ವ್ಯವಸಾಯ ಶಿಕ್ಷಣ

ಈಗ ಕೊನೆಯದಾಗಿ ವ್ಯವಸಾಯ ಶಿಕ್ಷಣದ ಸ್ಥಾನಮಾನವನ್ನು ವಿವೇಚಿಸಬೇಕಾಗಿದೆ. ವಯಸ್ಸಿಗೆ ಬಂದ ಬಾಲಕರ ಒಲವು ಹೆಚ್ಚಾಗಿ ಜೀವನದ ವಾಸ್ತವಿಕತೆಗಳನ್ನು ತಿಳಿದುಕೊಳ್ಳುವುದರ ಕಡೆಗಿರುತ್ತದೆ. ಈ ಮಾತಿನ ಸತ್ಯತೆ ವ್ಯವಸಾಯ ಶಿಕ್ಷಣದ ಪ್ರತಿಪಾದಕರಿಗೆ ಪುಷ್ಟಿಕೊಡುತ್ತದೆ. ವ್ಯವಸಾಯಕ್ಕೆ ಶೈಕ್ಷಣಿಕ ಬೆಲೆಯಿಲ್ಲವೆಂದು ಹೇಳುವ ಮಾತನ್ನು ಅದು ಅಲ್ಲಗಳೆಯುತ್ತದೆ. ಈ ಸಮಸ್ಯೆಯನ್ನು ವಿವೇಚಿಸುವಾಗ ಕೇವಲ ಇಂದಿನ ಅಪರಿಪೂರ್ಣ ಸಾಮಾಜಿಕ ಸ್ಥಿತಿಗತಿಗಳನ್ನಷ್ಟೇ ಗಮನಿಸಕೂಡದು; ಆದರೆ ಪರಿಶುದ್ಧ ಶೈಕ್ಷಣಿಕ ತತ್ತ್ವಗಳಮೇಲೆ ಇದರ ವಿವೇಚನೆ ಮಾಡುವುದೊಳಿತು. ಹೀಗೆ

ಮಾಡಿದಾಗ, ಕೆಲವು ವ್ಯವಸಾಯಗಳು ಶಾಲೆಯಲ್ಲಿ ಕಲಿಸಲ್ಪಡಲು ಯೋಗ್ಯ ವಿಲ್ಲೆಂದು ತಟ್ಟನೆ ಹೊಳೆಯುವುದು. ಒಬ್ಬ ಬಾಲಕನನ್ನು ಪೋಲೀಸನನ್ನಾಗಿ, ಮೋಟರ ಕಂಡಕ್ಟರನನ್ನಾಗಿ, ಇಲ್ಲವೆ ಅಂಗಡಿಯ ಗುಮಾಸ್ತನನ್ನಾಗಿ ತರಬೇತು ಗೊಳಿಸುವುದು ನಿಷ್ಪ್ರಯೋಜಕ. ಆದರೆ ಅವನನ್ನೇ ಒಬ್ಬ ನಾವಿಕನನ್ನಾಗಿ, ವೈಮಾನಿಕನನ್ನಾಗಿ, ಯಂತ್ರಜ್ಞನನ್ನಾಗಿ, ಶಿಲ್ಪಿಯನ್ನಾಗಿ ಇಲ್ಲವೆ ಒಕ್ಕಲುತನದ ತಜ್ಞನನ್ನಾಗಿ ತರಬೇತುಗೊಳಿಸುವುದು ಯೋಗ್ಯವೆಂದು ಹೇಳಬಹುದು. ಏಕೆಂ ದರೆ, ಈ ವ್ಯವಸಾಯಗಳು ಮಾನವ ಜೀವನದ ಶಾಶ್ವತವಾದ ಅವಶ್ಯಕತೆಗಳನ್ನು ಪೂರೈಸುತ್ತವೆ. ಇವುಗಳಿಗೆ ಒಂದು ಗೌರವಯುಕ್ತ ಇತಿಹಾಸವಿದೆ, ವಿಶಿಷ್ಟ ನೈತಿಕ ಪರಂಪರೆಯಿದೆ. ಈ ವ್ಯವಸಾಯಗಳು ಉತ್ತಮ ವ್ಯಕ್ತಿತ್ವಗಳನ್ನು ನಿರ್ಮಿಸಿವೆ; ಅತ್ಯುತ್ತಮ ವ್ಯಾವಹಾರಿಕ ಜ್ಞಾನ ಪ್ರಕಟನೆಗೈಯಲು ಮೇಧಾವಿ ಗಳಿಗೆ ಪೂರ್ಣ ಅವಕಾಶಗಳನ್ನು ಒದಗಿಸಿವೆ. ವೈಜ್ಞಾನಿಕ ಜ್ಞಾನ ಮತ್ತು ಕಲಾ ಪೂರ್ಣ ಸಂಸ್ಕೃತಿಗಳು ಇರದ ಹೊರತು ಈ ವ್ಯವಸಾಯಗಳಲ್ಲಿ ಜಯಶೀಲ ನಾಗುವುದು ಅಸಂಭವ. ಒಂದು ಉಚ್ಚತರಗತಿಯ ವ್ಯವಸಾಯದಲ್ಲಿ ಬಾಲಕನು ಶಿಕ್ಷಣ ಪಡೆದರೆ ಅವನಲ್ಲಿ ಹುದುಗಿರುವ ಗುಪ್ತ ಚೇತನಗಳಿಗೆ ಪೂರ್ಣ ಅವಕಾಶ ಸಿಗುತ್ತದೆ. ಇಂತಹ ವ್ಯವಸಾಯವನ್ನು ಬಾಲಕನು ಸ್ವತಃ ಆಯ್ದುಕೊಳ್ಳಬೇಕು. ಸ್ವಸಂತೋಷದಿಂದ ಆಯ್ದುಕೊಂಡ ವ್ಯವಸಾಯವು ಬಾಲಕನನ್ನು ತನ್ನ ಐಚ್ಛಿಕ ಗುರಿಯಕಡೆಗೆ ನೇರವಾಗಿ ಒಯ್ಯುತ್ತದೆ. ಇದರಿಂದ ಅವನಲ್ಲಿ ಆನಂದವೂ, ಸ್ವಾಭಿಮಾನವೂ ಹೆಚ್ಚುತ್ತವೆ. ಸಾಮಾನ್ಯ ವಿದ್ಯಾಭ್ಯಾಸವು ತೃಪ್ತಿಪಡಿಸಲಾರದ ಬಾಲಕನ ಮಾನಸಿಕ ಶಕ್ತಿಗಳನ್ನು ಉಪಯುಕ್ತ ವ್ಯವಸಾಯ ಶಿಕ್ಷಣವು ಪ್ರಚೋ ದಿಸುತ್ತದೆ. ಇದರಿಂದ ಅವನಲ್ಲಿ ಬುದ್ಧಿಬಲ ಮತ್ತು ನೈತಿಕ ಬಲಗಳು ವೃದ್ಧಿ ಹೊಂದುತ್ತವೆ. ಹೀಗೆ ವ್ಯವಸಾಯ ಶಿಕ್ಷಣವು ನಿಜವಾದ “ಉದಾರ ಸಾಂಸ್ಕೃ ತಿಕ ಶಿಕ್ಷಣ”ವಾಗಿ ಪರಿಣಮಿಸಬಲ್ಲದು. ಆದುದರಿಂದ, ಉದಾರ ಸ್ವರೂಪದ ವ್ಯವಸಾಯ ಶಿಕ್ಷಣವನ್ನು ಅಭ್ಯಾಸಪತ್ರಿಕೆಯಲ್ಲಿ ಸೇರಿಸುವುದು ವಿಹಿತ; ಆದರೆ ಅದನ್ನು ಸಾರ್ವತ್ರಿಕವಾಗಿ ಕಲಿಸುವುದು ವಿಹಿತವಲ್ಲ. ಏಕೆಂದರೆ, ಒಂದು ವ್ಯವ ಸಾಯದ ಉಪಯುಕ್ತತೆಯು ಬಾಲಕನಿಗೆ ಹೊಳೆದಾಗ ಮಾತ್ರ ಅದರಿಂದ ಅವನ ವಾಸ್ತವಿಕ ಭಾವನೆಗೆ ತೃಪ್ತಿ ದೊರೆಯುತ್ತದೆ.

# ೮. ನೈತಿಕ ಮತ್ತು ಧಾರ್ಮಿಕ ಶಿಕ್ಷಣ

ಶಾಲೆಯಲ್ಲಿ ನೈತಿಕ ಶಿಕ್ಷಣಕ್ಕೆ ಯಾವ ಸ್ಥಾನವಿರಬೇಕು ಎಂಬ ಪ್ರಶ್ನೆಗೆ ಉತ್ತರಕೊಡುವ ಮೊದಲು ನೀತಿಯು ಹೇಗೆ ಜನಿಸಿದೆಯೆಂಬುದನ್ನು ಸ್ಪಷ್ಟವಾಗಿ ತಿಳಿದುಕೊಳ್ಳುವುದವಶ್ಯ.

## ೧. ವೈಯಕ್ತಿಕ ನೀತಿಯ ಬೆಳವಣಿಗೆ

ಮನುಷ್ಯನು ಮೊದಲು ಬಹುಶಃ ಕುಟುಂಬ ಜೀವಿಯಾಗಿರಬೇಕು. ಈ ಕೌಟುಂಬಿಕ ಜೀವನವು ಮುಂದೆ ಸಮಾಜ ಜೀವನವಾಗಿ ಪರಿಣಮಿಸಿರಬೇಕು. ಸಮಾಜಶೀಲ ನೀತಿಗಳು ಮತ್ತು ಸಾಂಪ್ರದಾಯಗಳು ಕ್ರಮೇಣ ಇದೇ ರೀತಿಯುಂಟಾಗಿರಬೇಕು. ನೀತಿಯು ಮಾನವನ ಹುಟ್ಟುಗುಣವೆಂದು ಹೇಳುವುದು ತಪ್ಪು. ಜನ್ಮವೆತ್ತಿದಾಗ ಮಗುವಿನ ಪ್ರವೃತ್ತಿಗಳು ನೀತಿಪರವೂ ಇರುವುದಿಲ್ಲ, ಅನೀತಿಪರವೂ ಇರುವುದಿಲ್ಲ. ಅವನ ಜೀವನ ಚೇತನವು ಪರರ ಸಂಗಡ ವ್ಯವಹರಿಸಹಚ್ಚಿಸುತ್ತದೆ. ಅವನು ಇತರರ ಸಂಗಡ ವ್ಯವಹರಿಸುವ ರೀತಿಯಮೇಲೆ ಅವನ ನೀತಿಯು ರೂಪುಗೊಳ್ಳುತ್ತದೆ. ಮಗುವು ಸದಾ ಪರರ ಸಂಗಡ ಬಳಕೆ ಮಾಡುತ್ತ ಇರಲೇಬೇಕು. ಅದಕ್ಕಾಗಿ ಅವನು ತನ್ನ ರೀತಿ ನೀತಿಗಳನ್ನು ಪರರ ರೀತಿ ನೀತಿಗಳ ಸಂಗಡ ಹೊಂದಿಸಿಕೊಳ್ಳಲೇಬೇಕು, ಇತರರಂತೆ ತಾನೂ ನಡೆಯುವುದನ್ನು ಕಲಿಯುತ್ತದೆ. ಮಗುವು ಮೊದಲು ತನ್ನ ಕುಟುಂಬದ ನೀತಿಯನ್ನು ಕಲಿಯುತ್ತದೆ. ಆನಂತರ ತನ್ನ ಗೆಳೆಯರ ಗುಂಪಿನ ನೀತಿಯನ್ನು ಕಲಿಯುತ್ತದೆ. ವಯಸ್ಸಿಗೆ ಬಂದ ಹಾಗೆ ಅವನಲ್ಲಿ ಆದರ್ಶ ನೀತಿಯ ಕಲ್ಪನೆ ಜಾಗ್ರತವಾಗುತ್ತದೆ. ಸಮಾಜ ಸೇವೆ ಮತ್ತು ಸ್ವಾರ್ಥತ್ಯಾಗದ ಕಲ್ಪನೆಗಳು ಅವನಲ್ಲಿ ಪ್ರಬಲವಾಗುತ್ತವೆ. ಒಮ್ಮೊಮ್ಮೆ ಅವನು ಸಮಾಜದ ನೈತಿಕ ಮಟ್ಟವನ್ನೆತ್ತರಿಸಲು ತವಕಪಡುತ್ತಾನೆ. ಸಮಾಜವು ತನ್ನ ದೋಷಗಳನ್ನು ತಿದ್ದಿಕೊಳ್ಳಲು ಸಮ್ಮತಿಸದಿದ್ದರೆ ಅವನು ಅದರ ನೀತಿಯನ್ನೇ ಮನ್ನಿಸದೇ ಹೋಗಬಹುದು. ಆದರ್ಶ ಜೀವನದ ಉಬ್ಬಿನಲ್ಲಿ ಅವನು ಕುಂದುಕೊರತೆಗಳಿಂದ ಕೂಡಿದ ವಾಸ್ತವಿಕ ಸಮಾಜದಲ್ಲಿ ಜೀವಿಸುವುದನ್ನು ಮರೆಯಬಹುದು. ಹಿಂದೆ ಆಗಿಹೋದ ಮತ್ತು

ಇಂದು ಜೀವಿಸಿರುವ ಆದರ್ಶ ಪುರುಷರ ಕೇವಲ ಕಾಲ್ಪನಿಕ ಸಾನ್ನಿಧ್ಯದಲ್ಲಿ ಅವನು ಜೀವಿಸ ಬಯಸಬಹುದು.

## ೨. ಸಾಮಾಜಿಕ ನೀತಿಯ ಬೆಳವಣಿಗೆ

ಸಮಾಜ ಜೀವನವೇ ಜನಸಾಮಾನ್ಯರಿಗೆ ನೀತಿಯ ಪಾಠಗಳನ್ನು ಕಲಿಸುವ ಪಾಠಶಾಲೆ. ಹೀಗೆ ಕಲಿತ ನೀತಿಪರ ನಡತೆಗಳೇ ಸಾಮಾನ್ಯ ಜೀವನದ ಸ್ವಾಸ್ಥ್ಯ ಮತ್ತು ಸ್ಥಿರತೆಯನ್ನು ಕಾಪಾಡುತ್ತವೆ. ಬೇರೆ ಬೇರೆ ಸಮಾಜಗಳು ಬೇರೆ ಬೇರೆ ವಾತಾವರಣದಲ್ಲಿ ಬೆಳೆದಿವೆ. ಅವುಗಳ ಇತಿಹಾಸ ಗಳೂ ಭಿನ್ನವಾಗಿವೆ. ಆದುದರಿಂದ, ಅವುಗಳ ನೀತಿಯ ಶಾಸನಗಳೂ ಭಿನ್ನ ವಾಗಿವೆ. ಒಮ್ಮೊಮ್ಮೆ ಒಂದೇ ಸಮಾಜದಲ್ಲಿ ಜೀವಿಸುವ ಜನರಲ್ಲಿಯೂ ಸಹ ಒಳಿತು ಕೆಡಕುಗಳ ಬಗ್ಗೆ ಪರಸ್ಪರ ವಿರೋಧಾತ್ಮಕ ಕಲ್ಪನೆಗಳಿರುವುದು ಕಂಡುಬರುತ್ತದೆ.

ಮನುಷ್ಯನು ಕಾಡಾವಸ್ಥೆಯಲ್ಲಿರುವಾಗ ಪುರುಷನು ರಾಜ್ಯ, ಯುದ್ಧ, ಬೇಟೆ, ಧರ್ಮ, ಆಟ–ಪಾಟ ಮೊದಲಾದ ಎಲ್ಲ ಮಹತ್ವದ ಕಾರ್ಯ ಭಾರ ಗಳನ್ನು ತಾನೇ ವಹಿಸಿಕೊಂಡನು. ಉಳಿದೆಲ್ಲ ದಿನಚರಿಯ ಕಾರ್ಯಗಳನ್ನು ಸ್ತ್ರೀಗೆ ಒಪ್ಪಿಸಿದನು. ಆ ಬಗೆಯ ಸಮಾಜ ವ್ಯವಸ್ಥೆಗೆ ಸಲ್ಲುವ ನೀತಿಯು ಆಗ ರೂಢಿಯಲ್ಲಿ ಬಂತು. ಮುಂದೆ ಅದರ ಬದಲಾಗಿ "ಸ್ವಾಮಿ–ಸೇವಕ" ಸಮಾಜ ವ್ಯವಸ್ಥೆಯು ಸ್ಥಾಪಿತವಾಯಿತು. ಅದರಂತೆ ನೀತಿಯೂ ಬದಲಾ ಯಿತು. ಇಂದು ಆರಾಮ ಜೀವಿಗಳು ಮತ್ತು ಶ್ರಮಜೀವಿಗಳು ಎಂಬ ವರ್ಗಗಳಿಂದ ಕೂಡಿದ ಸಮಾಜವೇರ್ಪಟ್ಟಿದೆ. ಆರಾಮ ಜೀವಿಗಳ ನೀತಿಯು ಒಂದು ಬಗೆಯಾಗಿದ್ದರೆ, ಶ್ರಮಜೀವಿಗಳ ನೀತಿಯು ಇನ್ನೊಂದು ಬಗೆಯಾ ಗಿದೆ. ಈಗ ವರ್ಗರಹಿತ ಲೋಕಸತ್ತಾತ್ಮಕ ಸಮಾಜವು ಏರ್ಪಡುವ ಸಮ ಯವೂ ಸಮೀಪಿಸಿದೆ ಅದಕ್ಕೆ ಅನುಗುಣವಾದ ನೀತಿಯೂ ತಲೆದೋರುವು ದರಲ್ಲಿದೆ. ಕೆಲದಿನಗಳ ಹಿಂದೆ ನಾಝಿ ಜರ್ಮನಿಯಲ್ಲಿ ಪ್ರಚಲಿತವಿದ್ದ ಹಿಂಸಾ ತ್ಮಕ ಸಮಾಜ ವ್ಯವಸ್ಥೆ ಮತ್ತು ಅದರ ಕ್ರೂರ ನೀತಿಗಳನ್ನು ಯಾರೂ ಮರೆ ಯುವ ಹಾಗಿಲ್ಲ. ನಮ್ಮ ಸಮಾಜದಲ್ಲಿಯೂ ಸಹ ಅದರ ನೆರಳು ಕೆಲಮಟ್ಟಿಗೆ ಕಾಣಿಸುತ್ತಲಿದೆಯೆಂದು ದುರ್ದೈವದಿಂದ ಒಪ್ಪಿಕೊಳ್ಳಲೇಬೇಕು. ನಮ್ಮ

ದೇಶದ ಸನಾತನಿಗಳಲ್ಲಿ ಸರ್ವಾಧಿಕಾರಿತ್ವದ ಸಾಂಪ್ರದಾಯಿಕ ಕುರುಹುಗಳು ಉಳಿದಿವೆ. ಆದರೂ ಔದ್ಯೋಗಿಕ ರಂಗದಲ್ಲಿ, ವಾಹನ ಸೌಕರ್ಯಗಳಲ್ಲಿ, ರೇಡಿಯೋ ಮೊದಲಾದ ಸಂಶೋಧನೆಗಳಲ್ಲಿ ಉಂಟಾದ ಕ್ರಾಂತಿಗಳು ಜನ ಜೀವನದಮೇಲೆ ಶಾಶ್ವತವಾದ ಪರಿಣಾಮವನ್ನು ಬೀರಿವೆ. ತತ್ಪರಿಣಾಮ ವಾಗಿ ಜನತೆಯ ನೀತಿ ಪಥದಲ್ಲಿಯೂ ಕ್ರಾಂತಿಯಾಗಿದೆ.

## ೩. ನೈತಿಕ ನಿಯಮಗಳ ಶಾಶ್ವತೆ

ಬಾಲಕರ ನೀತಿಯನ್ನು ಉತ್ತಮಗೊಳಿಸಲು ಆತುರಪಡುವ ಶಿಕ್ಷಕನಿಗೆ ಮೇಲಿನ ಸಂಗತಿಗಳು ದಂಗುಬಡಿಸಬಹುದು. ಜನರ ಕೃತಿಗಳಲ್ಲಿ ಬಯಲಿಗೆ ಬರುವ ನೈತಿಕ ವಿಚಾರಗಳು ಅವರು ಜೀವಿಸಿರುವ ಸಮಾಜ ರಚನೆಯಮೇಲೆ ಅವಲಂಬಿಸಿವೆ. ಇದನ್ನು ಶಿಕ್ಷಕನು ಮೊದಲು ಅರಿಯಬೇಕು. ಮಾನವನ ಇತಿಹಾಸವನ್ನು ಅವಲೋಕಿಸಿದರೆ, ಸಮಾಜರಚನೆಯು ಕಾಲಕಾಲಕ್ಕೆ ಬದಲಾವಣೆಹೊಂದುತ್ತ ಬಂದಿದೆಯೆಂದು ಕಾಣುವುದು. ಇಂದು ಸಹ ಸಮಾಜರಚನೆಯು ತೀವ್ರಗತಿಯಿಂದ ಪರಿವರ್ತನೆ ಹೊಂದುತ್ತ ನಡೆ ದಿದೆ. ಅಂದಮೇಲೆ, ನೈತಿಕ ನಿಯಮಗಳ ಶಾಶ್ವತತೆಯ ಗತಿಯೇನು ? ನೈತಿಕ ನಿಯಮಗಳು ದೇವರು ವಿಧಿಸಿದ ಕಟ್ಟಪ್ಪಣೆಗಳೆಂದು ಹೇಗೆ ನಂಬ ಬೇಕು ? ನಿಜವಾಗಿ ನೋಡಿದರೆ, ಮಾನವನು ಜ್ಞಾನ ಮತ್ತು ಕಲಾ ಪ್ರಪಂಚ ಗಳಲ್ಲಿ ಕೆಲವುಸಲ ಪ್ರಗತಿಹೊಂದಿದ್ದಾನೆ; ಹಲವುಸಲ ಪ್ರಗತಿಗೆ ಹಿಮ್ಮುಖ ವಾಗಿ ನಡೆದಿದ್ದಾನೆ. ಅದರಂತೆ ನೈತಿಕ ಪ್ರಪಂಚದಲ್ಲಿಯೂ ಸಹ ಮಾನವನು ಕೆಲವುಸಲ ಪ್ರಗತಿಹೊಂದಿದ್ದಾನೆ; ಎಷ್ಟೋಸಲ ದಾರಿತಪ್ಪಿ ನಡೆದಿದ್ದಾನೆ. ಆದರೂ ಮಾನವನ ಈ ಮೂರೂ ಪ್ರಪಂಚಗಳಲ್ಲಿ ಕಾಲಕಾಲಕ್ಕೆ ಮಹಾ ತ್ಮರು ಸನ್ಮಾರ್ಗವನ್ನು ತೋರಿಸುತ್ತ ಬಂದಿದ್ದಾರೆ. ವಿವೇಕ ಬದ್ಧವಾದ, ಆದರ್ಶ ಜೀವನಕ್ಕೆ ಸಲ್ಲತಕ್ಕ, ತ್ರಿಕಾಲಗಳಲ್ಲಿಯೂ ಎಲ್ಲರೂ ಪಾಲಿಸಲೇ ಬೇಕಾದ ನೈತಿಕ ನಿಯಮಗಳನ್ನು ಅವರು ತಮ್ಮ ಜೀವನಗಳ ನಿದರ್ಶನ ಗಳಿಂದ ಯಥಾರ್ಥವಾಗಿ ತೋರಿಸಿದ್ದಾರೆ. "ತನ್ನಂತೆ ಪರರನ್ನು ಕಾಣು," "ಸತ್ಯಕ್ಕೆ ಸಾವಿಲ್ಲ ಸುಳ್ಳಿಗೆ ಸುಖವಿಲ್ಲ," — ಮೊದಲಾದ ನೈತಿಕ ನಿಯಮಗಳ ಸತ್ಯತೆಯು ಅಬಾಧಿತವಾಗಿರುತ್ತದೆ. ಮನುಷ್ಯ ಜೀವನದಲ್ಲಿ ಇಂತಹ ನಿಯ ಮಗಳ ನಿರಂತರ ಉಪಯುಕ್ತತೆಯ ಬಗ್ಗೆ ಸಂಶಯಪಡಬೇಕಾಗಿಲ್ಲ. ಜೀವ

ನದ ವಿವಿಧ ಸನ್ನಿವೇಶಗಳಲ್ಲಿ ವಿವಿಧ ರೀತಿಯಿಂದ ಅವುಗಳ ಉಪಯುಕ್ತತೆಯು ಕಂಡುಬರುತ್ತದೆ.

## ೪. ಶಾಲೆಯಲ್ಲಿ ನೀತಿಪರ ಸಮಾಜರಚನೆ

ಈ ಸಿದ್ಧಾಂತವನ್ನು ಒಪ್ಪಿಕೊಂಡದ್ದಾದರೆ ಇದರಿಂದ ಕೆಲವು ಶೈಕ್ಷಣಿಕ ಉಪಸಿದ್ಧಾಂತಗಳು ಹೊರಡುತ್ತವೆ : ಜನರ ಕೃತಿಗಳಲ್ಲಿ ತೋರ್ಪಡುವ ನೀತಿ ಮತ್ತು ಅವರು ಆದರ್ಶವಾಗಿಟ್ಟುಕೊಂಡ ನೀತಿಗಳ ನಡುವೆ ಅನೇಕ ಸಲ ಭಿನ್ನತೆಯಿರುವುದು ಕಂಡುಬರುವುದು. ಇದು ದುರ್ದೈವದ ಸಂಗತಿ. ಸಮಾಜ ರಚನೆಯ ನೀತಿ ಮತ್ತು ಆದರ್ಶನೀತಿಗಳ ನಡುವಿನ ತಾಕಲಾಟದ ಪ್ರತಿಫಲ ವಾಗಿ ಜನರ ವೈಯಕ್ತಿಕ ನೀತಿಯು ಉದಯಿಸುತ್ತದೆ. ಆದುದರಿಂದ, ಶಾಲೆಯ ಸಮಾಜ ರಚನೆಯನ್ನು ಪವಿತ್ರಗೊಳಿಸದ ಹೊರತು ಬಾಲಕರಿಗೆ ನೈತಿಕ ನಿಯಮದ ಪಾಠಗಳನ್ನೆಷ್ಟು ಕಲಿಸಿದರೂ ಪ್ರಯೋಜನವಿಲ್ಲ.

ಯಾವ ಬಗೆಯ ನಾಗರಿಕರನ್ನು ತರಬೇತುಗೊಳಿಸಬೇಕಾಗಿದೆಯೋ ಅದೇ ಬಗೆಯ ಸಮಾಜವನ್ನು ಶಾಲೆಯಲ್ಲಿ ನಿರ್ಮಿಸಬೇಕು. ಉಚ್ಚ ವರ್ಗಗಳ ಘನತೆಯನ್ನು ಕಾಯ್ದುಕೊಳ್ಳುವ ಉದ್ದೇಶದಿಂದ ಶಿಕ್ಷಣ ಕೊಡುತ್ತಿದ್ದ ಹಿಂದಿನಕಾಲದ ಶಾಲೆಗಳ ಸಮಾಜರಚನೆಯು ಒಂದುಬಗೆಯಾಗಿತ್ತು. ಪೈಪೋಟಿಯನ್ನು ಅಳಿಸಿ ಸಹಕಾರ ಶೀಲತೆಯನ್ನು ಉಂಟುಮಾಡುವ ಉದ್ದೇಶ ದಿಂದ ಸಂಘಟಿತವಾದ ಇಂದಿನ ಸುಧಾರಿಸಿದ ಶಾಲೆಗಳ ಸಮಾಜರಚನೆಯು ಇನ್ನೊಂದು ಬಗೆಯದಾಗಬೇಕು. ನಿಜವಾದ ಸಾಮಾಜಿಕ ಸ್ವಾನುಭವದ ಬೆಂಬಲವಿಲ್ಲದ ನೀತಿಯ ಪಾಠಗಳಿಗೆ ಬೆಲೆಯಿಲ್ಲ. ನಡತೆಯ ಒಳಿತು ಕೆಡಕುಗಳನ್ನು ಬಾಲಕರು ಸ್ವಾನುಭವದಿಂದ ಅರಿತುಕೊಳ್ಳಬೇಕು. ಶಾಲೆಯ ಉತ್ತಮ ಸಾಂಪ್ರದಾಯಗಳ ಮಾರ್ಗದರ್ಶನ ಅವರಿಗೆ ದೊರೆಯಬೇಕು. ಆ ಸಾಂಪ್ರದಾಯಗಳ ಲಾಭಪಡೆದುಕೊಳ್ಳಲು ಅವರು ಸ್ವತಂತ್ರರಿರಬೇಕು.

ಕೊನೆಗೆ ಒಂದು ಮಾತು. ಶಿಕ್ಷಕನು ಸ್ವತಃ ಪಾಲಿಸುತ್ತಿರುವ ಮತ್ತು ಪ್ರಚಾರದಲ್ಲಿ ತರಲು ಪ್ರಯತ್ನಪಡುತ್ತಿರುವ ನೈತಿಕ ಸಾಂಪ್ರದಾಯವು ಅವನ ಸಾಮಾಜಿಕ ಅನುಭವ ಮತ್ತು ಇತಿಹಾಸಗಳಿಂದಲೇ ರೂಪುಗೊಂಡಿರುತ್ತದೆ. ಇದನ್ನು ಅವನು ನೆನಪಿನಲ್ಲಿಡಬೇಕು. ಅವನು ತನ್ನ ನೈತಿಕ ಸಾಂಪ್ರದಾ

ಯುವ ಮೂಲಗಳನ್ನು ಗೊತ್ತುಹಚ್ಚಬೇಕು. ಈ ಸಾಂಪ್ರದಾಯವು ಒಂದು ವರ್ಗ ಇಲ್ಲವೆ ಜನಾಂಗಕ್ಕೆ ಹೊಂದಿಕೊಂಡ ಕೀಳು ಭಾವನೆಯಿಂದ ಉದ್ಭವಿಸಿರ ಕೂಡದು. ಅದು ಮಾನವನ ವಿಶ್ವಬಂಧುತ್ವದ ಶಾಶ್ವತ ನೀತಿಯನ್ನು ಪ್ರತಿನಿಧಿ ಸುತ್ತಿರಬೇಕು. ಇಂತಹ ನೀತಿಗೆ ಮಾತ್ರ ಅಭ್ಯಾಸಪತ್ರಿಕೆಯಲ್ಲಿ ಸ್ಥಾನವಿದೆ. ಇದು ಶಿಕ್ಷಕನ ನಿಷ್ಪಕ್ಷಪಾತತನಕ್ಕೆ ಆಹ್ವಾನವಿಟ್ಟಂತಿದೆ.

### ೫. ಧಾರ್ಮಿಕ ಭಾವನೆಯ ಇಳಿಮುಖ

ಇಂದಿನ ಶಾಲೆಗಳಲ್ಲಿ ಧಾರ್ಮಿಕ ಶಿಕ್ಷಣದ ಮಹತ್ವವು ಕಡಿಮೆಯಾಗಿದೆ. ಇದು ಶಾಲೆಗಳ ತಪ್ಪಲ್ಲ. ಅನೇಕ ಪ್ರಗತಿಪರ ಜನಾಂಗಗಳು ರಾಜಕೀಯ ಕಾರಣಗಳಿಗಾಗಿ ಶಾಲೆಗಳಲ್ಲಿ ಬಾಲಕರಿಗೆ ಧಾರ್ಮಿಕ ಶಿಕ್ಷಣ ಕೊಡುವುದನ್ನು ನಿಲ್ಲಿಸಿವೆ. ಆದಕಾರಣ ಧಾರ್ಮಿಕ ಶಿಕ್ಷಣವು ಹಿಂದುಳಿದಿದೆ.

ಪೂಜಿಸಲರ್ಹನಾದ ಸರ್ವಶಕ್ತನಿದ್ದಾನೆಂದು ತಿಳಿಯುವುದೇ ಧಾರ್ಮಿಕ ಭಾವನೆಯ ತಿರುಳು. ಇಂತಹ ಧಾರ್ಮಿಕ ಭಾವನೆ ಹಾಗೂ ಮಾನವನ ವೈಜ್ಞಾನಿಕ ಪ್ರವೃತ್ತಿಗಳ ನಡುವೆ ಎಂದಿನಿಂದಲೂ ತಾಕಲಾಟವಿದ್ದೇ ಇದೆ. ವಿಜ್ಞಾನವು ಇಂದು ಭೌತಿಕ ಶಾಸ್ತ್ರಗಳಲ್ಲಷ್ಟೇ ಪ್ರಗತಿ ಹೊಂದಿರದೆ ಸಾಮಾ ಜಿಕ ಶಾಸ್ತ್ರಗಳಲ್ಲಿಯೂ ಸಹ ಪ್ರಗತಿ ಹೊಂದಿದೆ. ವಿವೇಕಬದ್ಧವಾಗಿ ನಡೆ ದಿರುವ ನೈಸರ್ಗಿಕ ಹಿನ್ನೆಲೆಯಲ್ಲಿ ಹುಟ್ಟಿ ಬೆಳೆದಿರುವ ಮಾನವನು ಮೂಲತಃ ವಿವೇಕವಂತನಾಗಿದ್ದಾನೆ. ಅವನು ತನ್ನ ವಿವೇಕ ಮತ್ತು ಬುದ್ಧಿ ಭಾವನೆಗಳ ಬಲದಿಂದ ನೀತಿವಂತನಾಗಿ ಬಾಳಲು ಸಾಧ್ಯವಿದೆಯೆಂದು ಮಾನಸಶಾಸ್ತ್ರವು ಪ್ರತಿಪಾದಿಸುತ್ತದೆ. ಅಂದಮೇಲೆ, ಅವನನ್ನು ಸನ್ಮಾರ್ಗದಲ್ಲಿಡಲು ದೇವರ ಅಂಜಿಕೆಯು ಅವಶ್ಯವಿಲ್ಲವೆಂದು ಹಲವು ವಿಚಾರಪರರು ಅಭಿಪ್ರಾಯಪಟ್ಟಿ ದ್ದಾರೆ. ಆದರೆ ಒಂದು ಕಾಲದಲ್ಲಿ ಮನುಷ್ಯನು ಕಾಡಾವಸ್ಥೆಯಲ್ಲಿದ್ದನು. ಆಗ ಅವನಿಗೆ ನೈಸರ್ಗಿಕ ಘಟನೆಗಳ ಕಾರಣಗಳನ್ನು ತಿಳಿದುಕೊಳ್ಳಲು ಸಾಧ್ಯವಾಗಲಿಲ್ಲ. ಅವನು ತನ್ನ ಬುದ್ಧಿಗೆ ನಿಲುಕದ ನೈಸರ್ಗಿಕ ಘಟನೆಗಳ ಹಿಂದೆ ತನಗಿಂತಲೂ ಅನಂತಪಟ್ಟು ಶಕ್ತಿವಂತನಾದ ಸೂತ್ರಧಾರಿಯು ಇರ ಬಹುದೆಂದು ನಂಬಿದನು. ಈ ನಂಬುಗೆಯು ಬೇರೆ ಬೇರೆ ಜನಾಂಗಗಳಲ್ಲಿ ಬೇರೆ ಬೇರೆ ಪ್ರಮಾಣದಲ್ಲಿ ಇನ್ನೂ ಪ್ರಚಲಿತವಿದೆ. ಈ ನಂಬುಗೆಯಿಂದ ಮಾನವ ಪ್ರಪಂಚಕ್ಕೆ ಯಾವ ಅಪಾಯವೂ ಇಲ್ಲ. ಆದರೆ ಈ

ಭಾವನೆಯ ಜೊತೆಗೆ ವಿವಿಧ ಮೂಢ ನಂಬಿಕೆಗಳೂ, ಗೊಡ್ಡು ಸಾಂಪ್ರದಾಯ ಗಳೂ ಹುಟ್ಟಿಕೊಂಡಿವೆ. ಇವು ಪರಸ್ಪರ ವಿರೋಧಾತ್ಮಕವಾಗಿರುವುದರಿಂದ ಮಾನವ ಪ್ರಪಂಚದಲ್ಲಿ ಅನೇಕಾನೇಕ ಹಿಂಸಾತ್ಮಕ ಘಟನೆಗಳು ಸಂಭವಿಸಿವೆ ಮತ್ತು ಸಂಭವಿಸುತ್ತಲಿವೆ. ಹಿಂಸೆಗೆ ಇಂಬುಗೊಡುವ ಈ ಸಾಂಪ್ರದಾಯಿಕ ಧಾರ್ಮಿಕ ನಂಬುಗೆಗಳಿಂದ ಮಾನವ ಪ್ರಪಂಚವು ಪಾರಾಗಬೇಕಾದರೆ, ಶಾಲೆಯಲ್ಲಿ ಧಾರ್ಮಿಕ ಶಿಕ್ಷಣವನ್ನು ಕೊಡದೆ ಇರುವುದು ಉಚಿತವೆಂದು ಹಲವರ ಅಭಿಪ್ರಾಯ. ಇದಲ್ಲದೆ ಇನ್ನೂ ಒಂದು ಕಾರಣವಿದೆ : ಸಣ್ಣವ ರಿರುವಾಗಲೇ ದೇವರ ಅಂಜಿಕೆಯು ಬಾಲಕರಲ್ಲಿ ಪ್ರಬಲವಾದುದಾದರೆ ಅವರ ವ್ಯಕ್ತಿತ್ವದ ಬೆಳವಣಿಗೆಯು ಕುಂಠಿತವಾಗಬಹುದೇನೋ ಎಂದು ಕೆಲವರು ತಮ್ಮ ಭೀತಿಯನ್ನು ವ್ಯಕ್ತಪಡಿಸುತ್ತಾರೆ.

## ೬. ಧಾರ್ಮಿಕ ಆಸ್ಥೆಯುಳ್ಳವರಿಗೆ ಮಾತ್ರ ಧಾರ್ಮಿಕ ಶಿಕ್ಷಣ

ಒಂದು ವೇಳೆ ಬಾಲಕರಿಗೆ ಧಾರ್ಮಿಕ ಶಿಕ್ಷಣ ಕೊಡುವುದಾದರೆ, ಅವರಲ್ಲಿ ಅಂತಹ ಶಿಕ್ಷಣದ ಬಗ್ಗೆ ಆಸ್ಥೆಯಿದೆಯೋ ಅಥವಾ ಇಲ್ಲವೋ ಎಂಬುದನ್ನು ಅರಿತುಕೊಳ್ಳಬೇಕು. ಧಾರ್ಮಿಕ ವಿಷಯದ ಬಗ್ಗೆ ಆಸ್ಥೆಯಿರದ ಬಾಲಕರಿಗೆ ಒತ್ತಾಯ ಪಡಿಸಿ ಅದನ್ನು ಕಲಿಸುವುದೆಂದರೆ, ಅವರ ನೈಜ ಪ್ರವೃತ್ತಿಯ ಮೇಲೆ ಹಿಂಸೆ ಮಾಡಿದಂತೆಯೇ ಸರಿ. ಅದರಂತೆ, ಧಾರ್ಮಿಕ ಪ್ರವೃತ್ತಿಯುಳ್ಳ ಬಾಲಕ ರಿದ್ದರೆ ಆ ಪ್ರವೃತ್ತಿಗೆ ಪೋಷಕವಾಗುವ ಚಟುವಟಿಕೆಗಳನ್ನು ಕಲ್ಪಿಸಿಕೊಡದಿದ್ದರೆ, ಅವರ ವ್ಯಕ್ತಿತ್ವಗಳನ್ನು ಹತ್ತಿಕ್ಕಿದಂತೆಯೇ ಸರಿ. ಈ ಸಂದರ್ಭದಲ್ಲಿ ಶಿಕ್ಷಕನಾದ ವನು ವರ್ಡ್ಸ್‌ವರ್ಥ್ ಮಹಾಕವಿಯ ಈ ವಚನವನ್ನು ಸದಾ ನೆನಪಿನಲ್ಲಿಡಬೇಕು:

" ನೀರು ಕುಡಿಯಲೊಲ್ಲೆನೆನುವ,
ಕೆರೆಯ ಬಳಿಗೆ ಬಾರದಿರುವ,
ಕರಿಯ ಕುರಿಯ ಮರಿಗಳನ್ನು
ನೀರಿಗೆಂದು ಅವುಗಳನು
ಬಡೆದು ದೂಡಿಕೊಂಡು ಒಯ್ವ
ಹುಚ್ಚು ಮನುಜನೆಲ್ಲಿ ಸಿಗುವ ? "

# ೯. ಶಿಕ್ಷಣ ವಿಧಾನ

## ೧. ಅಭ್ಯಾಸದಲ್ಲಿ ಬೌದ್ಧಿಕ ಮತ್ತು ವ್ಯಾವಹಾರಿಕ ಚಟುವಟಿಕೆಗಳು

ಪ್ರತಿಯೊಂದು ವಿಷಯಕ್ಕೂ ಎರಡು ರೂಪಗಳಿವೆ: ಒಂದು ಬೌ ರೂಪ, ಇನ್ನೊಂದು ವ್ಯಾವಹಾರಿಕ ರೂಪ. ಕಲೆ ಮತ್ತು ಕೈಕೆಲಸಗಳಲ್ಲಿ ವ್ಯಾವಹಾರಿಕ ರೂಪವು ಒಡೆದು ಕಾಣುತ್ತದೆ; ಆದರೂ ಸಂಗೀತ, ಚಿತ್ರಕಲೆ, ಕೆತ್ತನೆಯ ಕೆಲಸ ಮತ್ತು ಉಡಿಗೆ ತೊಡಿಗೆ ಮೊದಲಾದವುಗಳೊಳಗಿನ ಸೌಂದರ್ಯವನ್ನು ಕಂಡುಕೊಂಡು ತಣಿಯುವುದು ಸಹ ಅಷ್ಟೇ ಮಹತ್ವದ್ದಾಗಿದೆ. ವಿಜ್ಞಾನದಲ್ಲಿ ಬೌದ್ಧಿಕ ರೂಪವು ಎದ್ದು ಕಾಣುತ್ತದೆ; ಆದರೂ ಸೃಷ್ಟಿಸೌಂದರ್ಯವನ್ನು ಅಭ್ಯಸಿಸಲು ತೆಗೆವ ಪ್ರವಾಸ, ಕೆರೆ ಭಾವಿಗಳಲ್ಲಿ ಈಸುವ ಜೆಲ್ಲಾಟ, ಶಾಲೆಯ ವಸ್ತುಸಂಗ್ರಹಾಲಯದ ರಕ್ಷಣೆ, ತೋಟಪಟ್ಟಿಯ ಕೆಲಸ, ಹವಾಮಾನದ ಪತ್ರಿಕೆಯನ್ನು ಸಿದ್ಧಪಡಿಸುವ ಕೆಲಸ, ವೈಜ್ಞಾನಿಕ ಪ್ರಯೋಗ ಮೊದಲಾದ ವ್ಯಾವಹಾರಿಕ ಚಟುವಟಿಕೆಗಳನ್ನು ಅದರ ಜೊತೆಗೆ ಜೋಡಿಸುವುದು ಒಳ್ಳೆಯದು. ಸಾಹಿತ್ಯದ ಅಭ್ಯಾಸಕ್ಕೂ ಒಂದು ವ್ಯಾವಹಾರಿಕ ಚಟುವಟಿಕೆಯಿರುವುದು ಒಳಿತು ಶಾಲೆಯ ಮಾಸಿಕ ಪತ್ರಿಕೆಗಾಗಿ ಕವನ, ಕಥೆ, ನಿಬಂಧ ಮೊದಲಾದವುಗಳನ್ನು ಬರೆದು ಕೊಡಲು ಬಾಲಕರನ್ನು ಪ್ರೋತ್ಸಾಹಿಸಬೇಕು; ನಾಟಕಗಳನ್ನು ಬರೆದು ಅವರೇ ಅವುಗಳನ್ನು ಅಭಿನಯಿಸಬೇಕು. ಗಣಿತದ ಅಭ್ಯಾಸದ ಜೊತೆಗೆ ಸ್ಕೌಟ, ಭೂಮಿತಿ ಮತ್ತು ಭೌತಿಕ ವಸ್ತುಗಳನ್ನು ಅಳೆಯುವ ಉಪಕರಣಗಳನ್ನು ಸಿದ್ಧಪಡಿಸುವುದನ್ನು ಸೇರಿಸತಕ್ಕದ್ದು. ಭೂಗೋಲು ಮತ್ತು ಗಣಿತಶಾಸ್ತ್ರಗಳೆರಡಕ್ಕೂ ಕೂಡಿ ಭೂನಿರೀಕ್ಷಣೆ ಮಾಡಿ ನಕಾಶೆಯನ್ನು ಸಿದ್ಧಪಡಿಸುವ ಕಾರ್ಯಕ್ರಮವನ್ನು ಜೋಡಿಸಬೇಕು. ಇತಿಹಾಸದ ಜೊತೆಗೆ ಸ್ಥಾನಿಕ ಇತಿಹಾಸದ ಸಂಶೋಧನೆಯ ಕಾರ್ಯಕ್ರಮ, ಇತಿಹಾಸ ಪ್ರಸಿದ್ಧ ಸ್ಥಳ ಮತ್ತು ವಸ್ತುಸಂಗ್ರಹಾಲಯಗಳಿಗೆ ಸಂದರ್ಶನ, ಹಳೆಯ ನಾಣ್ಯಗಳನ್ನು ಕೂಡಿಹಾಕುವ ಕಾರ್ಯ ಮೊದಲಾದವುಗಳನ್ನು ಜೋಡಿಸಬೇಕು. ಹೀಗೆ ಶಾಲೆಯ ಜೀವನದಲ್ಲಿ ಪ್ರತಿಯೊಂದು ವಿಷಯದ ನಿರ್ಮಾಪಕ ಪರಂಪರೆಯು

ನೈಜ ಸ್ವಭಾವಗಳನ್ನು ಪ್ರತಿಬಿಂಬಿಸುವ ಚಟುವಟಿಕೆಗಳಿರಬೇಕು. ಇಂತಹ ಚಟುವಟಿಕೆಗಳ ಮುಖಾಂತರ ವಿಷಯಗಳನ್ನು ಕಲಿಸಿದ್ದಾದರೆ, ಆಯಾ ವಿಷಯಗಳ ಬಗ್ಗೆ ನಿಜವಾದ ಜ್ಞಾನವು ಬಾಲಕರಿಗೆ ಕ್ರಮೇಣ ಉಂಟಾಗುವುದು.

## ೨. ಜ್ಞಾನದ ಬೆಳವಣಿಗೆಯ ಸೋಪಾನಗಳು

ಪ್ರತಿಯೊಂದು ವಿಷಯದ ಇತಿಹಾಸವನ್ನು ಪರಿಶೀಲಿಸಿದರೂ ಅಲ್ಲಿ ಬೆಳವಣಿಗೆಯ ಮೂರು ಸೋಪಾನಗಳನ್ನು ಕಾಣಬಹುದು. ಮೊದಮೊದಲು ನಮ್ಮ ಜ್ಞಾನವು ಅಚ್ಚರಿಯ ಮಟ್ಟದಲ್ಲಿರುತ್ತದೆ. ಇಲ್ಲಿ ಇತಿಹಾಸದ ವಿಷಯವನ್ನೇ ನಿದರ್ಶನವಾಗಿ ತೆಗೆದುಕೊಳ್ಳಬಹುದು. ಮೊದಮೊದಲು ಇತಿಹಾಸವು ಇಜಿಪ್ತದ ಪಿರ್‍ಯಾಮಿಡಗಳು, ಇರಾಕದ ಕಣ್ಮರೆಯಾದ ಬ್ಯಾಬಿಲೋನ ನಿನವ್ಹೆಗಳು, ಸಿಂಧೂನದೀ ತೀರದ ಮೊಹೆಂಜೊದಾರೋ–ಹರಪ್ಪಾಗಳಂತಹ ಹುದುಗಿಹೋದ ಊರುಗಳೂ, ಮೊದಲಾದ ವಿಚಿತ್ರ ಸಂಗತಿಗಳಿಂದ ಪ್ರಾರಂಭವಾಗುತ್ತದೆ. ಅವು ನಮಗೆ ಅಚ್ಚರಿಯನ್ನುಂಟುಮಾಡುತ್ತವೆ. ಆಮೇಲೆ ಇತಿಹಾಸವು ಶಿಲಾಶಾಸನಗಳಲ್ಲಿ, ದಿನಚರಿಯ ಮಂತ್ರಗಳಲ್ಲಿ ಚರಿತ್ರೆಗಳಲ್ಲಿ, ನಾಣ್ಯಗಳಲ್ಲಿ, ಕಟ್ಟಡಗಳ ಅವಶೇಷಗಳಲ್ಲಿ, ಮತ್ತು ತಾಮ್ರಪಟಗಳಲ್ಲಿ ತೋರ್ಪಡುತ್ತದೆ. ಆಗ ಅದು ನಮ್ಮಲ್ಲಿ ವಾಸ್ತವಿಕ ಭಾವನೆಯನ್ನು ಹೆಚ್ಚಿಸುತ್ತದೆ. ಕೊನೆಗೆ ನಮಗೆ ಲಭ್ಯವಿರುವ ಅನಂತ ಸಾಮಗ್ರಿಗಳ ಆಧಾರದ ಮೇಲೆ ತಾತ್ವಿಕ ಸ್ವರೂಪದ ಇತಿಹಾಸವನ್ನು ಬರೆಯಲು ಸಾಧ್ಯವಾಗುತ್ತದೆ. ಆಧುನಿಕ ಇತಿಹಾಸವು ಈ ಬಗೆಯಾಗಿದೆ. ಮನುಷ್ಯನ ಜ್ಞಾನ ವೃದ್ಧಿಯೂ ಸಹ ಇದೇ ಅನುಕ್ರಮವನ್ನು ಸ್ಥೂಲವಾಗಿ ಅನುಸರಿಸುತ್ತದೆಯೆನ್ನಬಹುದು.

## ೩. ಶಿಕ್ಷಣದಲ್ಲಿ 'ಅಚ್ಚರಿಯ' ಉಪಯೋಗ

ಈ ಬೆಳವಣಿಗೆಯ ಸೋಪಾನಗಳನ್ನು ನಾವು ಬಾಲಕರ ಜ್ಞಾನ ವೃದ್ಧಿಯ ರೀತಿಯಲ್ಲಿಯೂ ಸಹ ಕಾಣಬಹುದು. ಅಪರಿಚಿತ ವಸ್ತುವನ್ನು ಕಂಡಾಗ ನಮಗೆ ಆನಂದವೂ ಅಭಿರುಚಿಯೂ ಅಚ್ಚರಿಯೂ ಒಮ್ಮೆಲೇ

ಉಂಟಾಗುತ್ತವೆ. ಈ ಅನಿಸುವಿಕೆಯೇ ಎಲ್ಲ ಬೌದ್ಧಿಕ ಸಾಹಸಗಳ ಮೊದಲ ಹೆಜ್ಜೆ. ಇದೇ ಎಲ್ಲ ಸಂಶೋಧನೆಗಳಿಗೂ ಸ್ಫೂರ್ತಿದಾಯಕ ಸಂಗತಿ. ಇದರಿಂದಲೇ ಎಲ್ಲ ನೂತನ ವಿಚಾರಗಳಿಗೂ ಪ್ರಚೋದನೆ ದೊರೆಯುತ್ತದೆ. ಸಾಮಾನ್ಯ ವಿಜ್ಞಾನವನ್ನು ಕಲಿಸುವಾಗ ನಾವು ಬಾಲಕರ ಈ ಅಚ್ಚರಿಯ ಲವಲವಿಕೆಯನ್ನು ಉಪಯೋಗಪಡಿಸಿಕೊಳ್ಳುತ್ತೇವೆ. ಆದುದರಿಂದ, ಆ ವಿಷಯವನ್ನು ಬಾಲಕರು ಹೆಚ್ಚು ಆಸ್ಥೆಯಿಂದ ಕಲಿಯುತ್ತಿರುವುದು ನಮ್ಮ ದೃಷ್ಟಿಗೆ ಬೀಳುತ್ತಿರುತ್ತದೆ. ಆದರೆ ಗಣಿತವನ್ನು ಕಲಿಸುವಾಗ ಈ ಅಚ್ಚರಿಯ ಲವಲವಿಕೆಯನ್ನು ಉಪಯೋಗಿಸಿಕೊಳ್ಳುವುದಿಲ್ಲ. ಆದುದರಿಂದ, ಆ ವಿಷಯವನ್ನು ಬಾಲಕರು ಆಸ್ಥೆಯಿಂದ ಕಲಿಯುತ್ತಿರುವುದಿಲ್ಲ. ಬಾಲ್ಯದಲ್ಲಿ ಅಪರಿಚಿತ ವಸ್ತುವಿನಲ್ಲಿಯ ಅಭಿರುಚಿಯು ಬಹಳ ಪ್ರಬಲವಾಗಿರುತ್ತದೆ. ದೊಡ್ಡವರಾದಮೇಲೆಯೂ ಸಹ ಅದು ಸಂಪೂರ್ಣ ಮಾಯವಾಗುವುದಿಲ್ಲ. ಆದುದರಿಂದ, ಬಾಲಕರಿಗೆ ಅಚ್ಚರಿಯನ್ನುಂಟುಮಾಡುವ ಸಂಗತಿಗಳನ್ನು ಅವರ ಗಮನಕ್ಕೆ ತರುವುದರಿಂದ ಅಭ್ಯಾಸದಲ್ಲಿ ಅವರಿಗೆ ಹುಮ್ಮಸ ಬರುತ್ತದೆ.

### ೪. ಶಿಕ್ಷಣದಲ್ಲಿ ಮೂರೂ ಅಂಶಗಳ ಸಾಮರಸ್ಯ

ಬಾಲಕರು ಬೆಳೆದು ದೊಡ್ಡವರಾಗುತ್ತ ಹೋದಂತೆ ಅವರ ಅಭ್ಯಾಸ ಕ್ರಮದಲ್ಲಿ ಅಚ್ಚರಿಯ ಅಭಿರುಚಿ, ವಾಸ್ತವಿಕತೆಯ ಭಾವನೆ ಮತ್ತು ತಾತ್ವಿಕ ದೃಷ್ಟಿಗಳು ಒಂದರ ಹಿಂದೊಂದು ಕಂಡುಬರುತ್ತವೆ. ಆದರೂ ಯಾವ ವಯಸ್ಸಿನಲ್ಲಿಯೂ ಸಹ ಈ ಮೂರೂ ಅಂಶಗಳು ಸಂಪೂರ್ಣವಾಗಿ ಕಣ್ಮರೆಯಾಗುವುದಿಲ್ಲ. ಆದುದರಿಂದ, ಸಣ್ಣಮಕ್ಕಳ ಮನಸ್ಸಿನಲ್ಲಿ ಕೇವಲ ಅಚ್ಚರಿಗೊಳಿಸುವಂತಹ ಸಂಗತಿಗಳನ್ನೇ ತುಂಬಕೂಡದು. ಅವರು ಕಲಿಯತಕ್ಕ ವಿಷಯಗಳ ಉಪಯುಕ್ತತೆಯನ್ನು ಅವರ ಮನಸ್ಸಿನಮೇಲೆ ಸುಲಭವಾಗಿ ಬಿಂಬಿಸಬಹುದು. ಇದಲ್ಲದೆ, ಆಯಾ ವಸ್ತುಗಳ ನಡುವಿನ ಪರಸ್ಪರ ಸಂಬಂಧವನ್ನು ಗುರುತಿಸಿ ಅವರು ಆನಂದಪಡಬಲ್ಲರು. ಇದೇ ತಾತ್ವಿಕ • ದೃಷ್ಟಿಯ ಮೂಲ. ೧೦–೧೪ ವಯಸ್ಸಿನ ಬಾಲಕರಲ್ಲಿ ವಸ್ತುಗಳ ಉಪಯುಕ್ತತೆಯ ಭಾವನೆಯು ಪ್ರಬಲವಾಗಿದ್ದರೂ, ಅವರ ಮನಸ್ಸಿನಲ್ಲಿ ಅಚ್ಚರಿ ಮತ್ತು ತಾತ್ವಿಕತೆಗಳ ಅಂಶಗಳು ಬೆರೆತಿರುತ್ತವೆ. ಅದರಂತೆ, ವಯಸ್ಕ ಬಾಲಕರಲ್ಲಿ ತಾತ್ವಿಕ ದೃಷ್ಟಿಯು ಎಷ್ಟೇ ಪ್ರಬಲವಾಗಿದ್ದರೂ ಸಹ ಅವರಲ್ಲಿ ಉಳಿದ

ಎರಡು ಅಂಶಗಳೂ ಅಷ್ಟೇ ಮಹತ್ವವಾಗಿರುತ್ತವೆ. ಆದುದರಿಂದ, ಒಂದು ವಿಷಯದ ಅಭ್ಯಾಸದಲ್ಲಿ ಬಾಲಕನ ವಯಸ್ಸಿಗೆ ತಕ್ಕಂತೆ ಈ ಮೂರೂ ಅಂಶ ಗಳ ಸಾಮರಸ್ಯವಿರತಕ್ಕದ್ದು.

### ೫. ಯೋಜನಾ ಶಿಕ್ಷಣ ವಿಧಾನ

ಬಹುದಿನಗಳಿಂದ ಆಚರಣೆಯಲ್ಲಿರುವ ಶಿಕ್ಷಣ ವಿಧಾನಗಳಲ್ಲಿ ಜ್ಞಾನದ ಬೆಳವಣಿಗೆಯ ಮೊದಲಿನ ಎರಡು ಸೋಪಾನಗಳನ್ನು ಮರೆತು ಶಿಕ್ಷಣವನ್ನು ತಾತ್ವಿಕವಾಗಿ ಕಲಿಸಲ್ಪಡುತ್ತಿತ್ತು. ಇದು ಅವುಗಳ ಮುಖ್ಯ ದೋಷ. ಬಾಲ್ಯದಲ್ಲಿ ಅಪರಿಚಿತ ವಸ್ತುಗಳು ಪ್ರಬಲವಾದ ಆಕರ್ಷಣೆಯನ್ನುಂಟುಮಾ ಡುತ್ತವೆ. ಶಿಕ್ಷಣ ವಿಧಾನವು ಇಂತಹ ಆಕರ್ಷಣೆಯ ಪೂರ್ಣ ಲಾಭ ತೆಗೆದು ಕೊಳ್ಳಬೇಕು. ಇಲ್ಲಿ ಒಬ್ಬ ಜಾಣ ಶಿಕ್ಷಕನ ನಿದರ್ಶನವನ್ನು ತೆಗೆದುಕೊಳ್ಳ ಬಹುದು. ಅವನ ವಿದ್ಯಾರ್ಥಿಗಳು ತೋಟಪಟ್ಟಿಯನ್ನು ಮಾಡುವ ಕಾರ್ಯ ದಲ್ಲಿ ಲವಲವಿಕೆಯುಳ್ಳವರಾಗಿದ್ದರಂತೆ. ಅವನು ಅವರನ್ನು ಒಂದು ಹೊಲಕ್ಕೆ ಕರೆದುಕೊಂಡು ಹೋದನಂತೆ. ತೋಟಪಟ್ಟಿ ಮಾಡುವ ಮಾಹಿತಿಯನ್ನು ಕೊಡುವ ಪುಸ್ತಕದ ಅವಶ್ಯಕತೆಯನ್ನು ಅವನು ಸಂದರ್ಭಾನುಸಾರ ಅವರಿಗೆ ಸೂಚಿಸಿದನಂತೆ. ಆಗ ಅವರು ಅಂತಹ ಪುಸ್ತಕವನ್ನು ಅನೇಕಸಲ ಓದಿ ಮುಗಿ ಸಿದರಂತೆ. ಅದರಂತೆ ತಮ್ಮ ಕಾರ್ಯಕ್ಕೆ ಉಪಯೋಗಬೀಳುವ ಎಲ್ಲ ಗಣಿತ ವನ್ನೂ ಕಲಿತರಂತೆ. ಹೀಗೆ ಅಚ್ಚರಿಯ ಮತ್ತು ಉಪಯುಕ್ತತೆಯ ಭಾವನೆ ಗಳಿಂದ ಪ್ರಚೋದಿತರಾದ ಬಾಲಕರು ಕೆಲವೇ ದಿನಗಳಲ್ಲಿ ಒಂದು ವರ್ಷದಲ್ಲಿ ಕಲಿಯುವಷ್ಟು ವಿಷಯವನ್ನು ಕಲಿತುಕೊಂಡರಂತೆ. ಈ ಬಗೆಯ ಶಿಕ್ಷಣ ವಿಧಾನಕ್ಕೆ "ಯೋಜನಾ ಶಿಕ್ಷಣ ವಿಧಾನ"ವೆಂದು ಕರೆಯುವುದುಂಟು.

ಗಣಿತ, ಇತಿಹಾಸ, ಭೂಗೋಲು, ವಿಜ್ಞಾನ ಮೊದಲಾದ ವಿಷಯಗಳಲ್ಲಿ ಈ ಶಿಕ್ಷಣ ವಿಧಾನವನ್ನು ಅನುಸರಿಸಲು ಬಹಳ ಆಸ್ಪದವಿದೆ. ಈ ವಿಧಾನದಲ್ಲಿ ಒಂದು ವ್ಯಾವಹಾರಿಕ ಸಮಸ್ಯೆಯನ್ನು ಬಾಲಕರು ಆಯ್ದುಕೊಳ್ಳುತ್ತಾರೆ. ಆಮೇಲೆ ಸಮಸ್ಯೆಯನ್ನು ಬಿಡಿಸಲು ಬೇಕಾಗುವ ಎಲ್ಲ ಸಾಮುಗ್ರಿಗಳನ್ನು ಅವರು ಕೂಡಿ ಹಾಕುತ್ತಾರೆ. ಈ ಸಾಮುಗ್ರಿಗಳನ್ನು ಕೂಲಂಕಷವಾಗಿ ಪರಿಶೀಲಿಸುವು ದರಿಂದ ಕೆಲವು ತಾತ್ಪೂರ್ತಿಕ ಸಿದ್ಧಾಂತಗಳು ಅವರಿಗೆ ಕಾಣಿಸಿಕೊಳ್ಳುತ್ತವೆ. ಆ ಸಿದ್ಧಾಂತಗಳನ್ನು ವಾಸ್ತವಿಕ ಪ್ರಯೋಗಗಳ ಮುಖಾಂತರ ಒರೆಹಚ್ಚಿ

ನೋಡುತ್ತಾರೆ. ಆಮೇಲೆ ಕೊನೆಯ ಸಿದ್ಧಾಂತವನ್ನು ಮಾಡಿ ಅವರು ಕೈಕೊಂಡ ಸಮಸ್ಯೆಯನ್ನು ಬಿಡಿಸುತ್ತಾರೆ. ಇದು ಯೋಜನಾ ಶಿಕ್ಷಣ ವಿಧಾನದ ತಿರುಳು. ಒಂದು ವಿದ್ಯುತ್ ಗಂಟೆಯು ಹೇಗೆ ಕಾರ್ಯ ಮಾಡುತ್ತದೆ ಯೆಂಬ ಸಮಸ್ಯೆಯನ್ನು ಬಿಡಿಸುವಾಗ ವಿದ್ಯುಚ್ಛಕ್ತಿಯ ತತ್ವಗಳನ್ನು ಕಲಿತು ಕೊಳ್ಳಬಹುದು. ವೈಮಾನಿಕನೊಬ್ಬನು ತನ್ನ ಹಾದಿಯನ್ನು ಹೇಗೆ ಕಂಡು ಕೊಳ್ಳುವನೆಂಬ ಸಮಸ್ಯೆಯನ್ನು ಬಿಡಿಸುವಾಗ ಗಣಿತ ಶಾಸ್ತ್ರವನ್ನು ಕಲಿತು ಕೊಳ್ಳಬಹುದು. ಕಳೆದ ಯುದ್ಧದಲ್ಲಿ ಹೋರಾಡಿದ ಅನೇಕ ಸೈನಿಕರಿಗೆ ಭೂಗೋಲಿನ ವ್ಯಾವಹಾರಿಕತೆಯು ಇದೇ ರೀತಿ ಹೊಳೆದಿರಬೇಕು. ರಾಜಕೀಯ ಸಮಸ್ಯೆಗಳನ್ನು ತಿಳಿದುಕೊಳ್ಳಲು ಇಚ್ಛಿಸಿದಾಗ ಅವರಿಗೆ ಇತಿಹಾಸದ ಮಹತ್ವವು ಇದೇ ರೀತಿ ಹೊಳೆದಿರಬೇಕು. ತಮ್ಮ ಮಕ್ಕಳಿಗೆ ಅವರು ಇದೇ ಬಗೆಯ ವ್ಯಾವಹಾರಿಕ ಶಿಕ್ಷಣವನ್ನು ಕೊಡಿಸಲು ಬಯಸಿರಬೇಕು.

ಕಲೆ ಮತ್ತು ಕೈಕೆಲಸಗಳಲ್ಲಿ ಈ ವಿಧಾನವನ್ನು ಅನುಸರಿಸುವುದು ಸುಲಭವಾಗಿದೆ. ಆದರೂ ಹಲವು ಸಲ ಈ ಮಾತನ್ನು ಅಲಕ್ಷಿಸಲಾಗುತ್ತದೆ. "ಬಾಲಕರು ತಮ್ಮ ಶಾಲೆಯ ಕಟ್ಟಡವನ್ನು ತಾವೇ ಕಟ್ಟಿಕೊಳ್ಳಬೇಕು; ತಾವೇ ಅದನ್ನು ಶೃಂಗರಿಸಿಕೊಳ್ಳಬೇಕು; ತಮ್ಮ ಆಟದ ಬೈಲನ್ನು ತಾವೇ ಸಿದ್ಧಪಡಿಸಿಕೊಳ್ಳಬೇಕು; ತಮ್ಮ ನಾಟಕ ಮಂದಿರವನ್ನು ತಾವೇ ಕಟ್ಟಿ ಕೊಳ್ಳಬೇಕು; ಅದರಲ್ಲಿಯ ದೃಶ್ಯಗಳನ್ನು ತಾವೇ ಜೋಡಿಸಿಕೊಳ್ಳಬೇಕು." ಎಂದು ಮೊದಲಾಗಿ ಈ ಶಿಕ್ಷಣ ವಿಧಾನವು ಸೂಚಿಸುತ್ತಿಲ್ಲ. ಇಂತಹ ಕಾರ್ಯ ಗಳು ಬಾಲಕರು ಪ್ರಯಾಸಪಟ್ಟು ಪೂರ್ತಿಗೊಳಿಸಬಹುದು. ಆದರೆ ಇಲ್ಲಿ ಕೇವಲ ದುಡಿಮೆಗೆ ಬೆಲೆಯಿಲ್ಲ; ಯೋಜನೆಯಿಂದ ಬಾಲಕರಿಗೆ ದೊರೆಯ ಬಹುದಾದ ಶಿಕ್ಷಣಕ್ಕೆ ಬೆಲೆಯಿದೆ. ಬಾಲಕರು ಸಣ್ಣಪುಟ್ಟ ಯೋಜನೆ ಗಳನ್ನು ಕೈಕೊಂಡು ಪೂರ್ತಿಗೊಳಿಸಬಲ್ಲರು. ಇಂತಹ ಯೋಜನೆಗಳು ಬೇಕಾದಷ್ಟಿವೆ. ಹೀಗೆ ಮಾಡುವುದರಿಂದ ವಿದ್ಯಾಭ್ಯಾಸವು ಹೆಚ್ಚು ಸಜೀವ ವುಳ್ಳದ್ದೂ ಪರಿಣಾಮದಾಯಕವೂ ಆಗುವುದರಲ್ಲಿ ಸಂಶಯವಿಲ್ಲ.

## ೬. ಗಾಂಧೀಜಿಯವರ ಮೂಲ ಶಿಕ್ಷಣ ವಿಧಾನ

ಗಾಂಧೀಜಿಯವರು ಪ್ರಚಾರಗೊಳಿಸಿದ ವರ್ಧಾ ಶಿಕ್ಷಣ ಯೋಜನೆಯು ಮೇಲೆ ಹೇಳಿದ ಶಿಕ್ಷಣ ವಿಧಾನಕ್ಕೆ ಸಂಬಂಧಿಸಿದುದಾಗಿದೆ. ಈ ವಿಧಾನದಲ್ಲಿ

ಒಂದು ಉಪಯುಕ್ತ ವ್ಯವಸಾಯವು ಕೇಂದ್ರ ಸ್ಥಳವನ್ನಾಕ್ರಮಿಸುತ್ತದೆ. ಆ ಕೇಂದ್ರ ವ್ಯವಸಾಯದ ಮುಖಾಂತರವೇ ಬಾಲಕರಿಗೆ ಬೌದ್ಧಿಕ ಶಿಕ್ಷಣ ವನ್ನು ಕೊಡಲಾಗುತ್ತದೆ. ಇತಿಹಾಸ, ಭೂಗೋಲು, ಭಾಷೆ, ಗಣಿತ, ಸಂಗೀತ ಮೊದಲಾದ ಎಲ್ಲ ವಿಷಯುಗಳನ್ನು ಆ ಕೇಂದ್ರ ವ್ಯವಸಾಯದ ಮುಖಾಂತರವೇ ಕಲಿಸಲಾಗುತ್ತದೆ. ಬಾಲಕರು ಸಿದ್ಧಪಡಿಸುವ ವಸ್ತುಗಳು ಕೇವಲ ಆಟಿಗೆಯ ವಸ್ತುಗಳಾಗಿರಬೇಕು. ಅವು ಜನರಿಗೆ ಉಪಯೋಗ ಬೀಳುವ ವಸ್ತುಗಳಾಗಿರಬೇಕು. ಅವುಗಳನ್ನು ವಿಕ್ರಯ ಮಾಡುವುದರಿಂದ ಬರುವ ಹಣವು ಶಿಕ್ಷಣದ ವೆಚ್ಚವನ್ನು ಪೂರೈಸಲು ಸಹಾಯಕವಾಗಬಲ್ಲದು. ಈ ಶಿಕ್ಷಣದ ಅವಧಿಯು ಏಳು ವರ್ಷ. ಈ ಅವಧಿಯಲ್ಲಿ ಬಾಲಕರಿಗೆ ಓದು ಬರಹ, ಸಾಮಾಜಿಕ ನಡತೆ, ಮತ್ತು ವ್ಯವಸಾಯವನ್ನು ಕಲಿಸಬಹುದು. ಈ ಯೋಜನೆಯಲ್ಲಿ ಮಾತೃಭಾಷೆಗೆ ಪ್ರಾಧಾನ್ಯತೆ ಕೊಡಲಾಗಿದೆ. ಅಹಿಂಸೆ ಮತ್ತು ಸಹಕಾರಯುಕ್ತ ಸಮಾಜ ಜೀವನಗಳು ಯೋಜನೆಯ ಅಡಿಗಲ್ಲು ಗಳು. ಅಭ್ಯಾಸದ ವಿಷಯುಗಳನ್ನೆಲ್ಲ ಜೀವನದ ವಾಸ್ತವಿಕ ಸನ್ನಿವೇಶಗಳ ಮುಖಾಂತರ ಕಲಿಸುವುದರಿಂದ ಶಾಲೆಯು ವಾಸ್ತವಿಕ ಜೀವನದ ಪ್ರಯೋಗ ಶಾಲೆಯಾಗುತ್ತದೆ. ಸಾಮಾಜಿಕ ಹೊಣೆಗಳನ್ನು ಬಾಲಕರು ಇದರಿಂದ ಹೆಚ್ಚು ಸ್ಪಷ್ಟವಾಗಿ ಕಲಿತುಕೊಳ್ಳುತ್ತಾರೆ. ಇವರಿಂದ ಸಮಾಜ ಮತ್ತು ಶಾಲೆಗಳ ನಡುವೆ ನಿಕಟವಾದ ಮಿತ್ರತ್ವವೂ ಉಂಟಾಗುತ್ತದೆ.

ಈ ಯೋಜನೆಯು ಯಶಸ್ವಿಯಾಗಲು ಅನೇಕ ಅಡಚಣಿಗಳುಂಟು. ಸರಿಯಾದ ಪುಸ್ತಕಗಳಿಲ್ಲ; ಯೋಗ್ಯ ಶಿಕ್ಷಕರಿಲ್ಲ; ಬಾಲಕರು ಸಿದ್ಧಪಡಿಸುವ ವಸ್ತುಗಳನ್ನು ವಿಕ್ರಯ ಮಾಡುವುದಾಗುವುದಿಲ್ಲ; ಎಲ್ಲ ಬಾಲಕರಿಗೂ ಸರಿ ಹೋಗುವ ವ್ಯವಸಾಯವು ದೊರೆಯುವುದಿಲ್ಲ; ಸರಿಯಾದ ವೇಳಾಪತ್ರಿಕೆ ಯನ್ನು ಮಾಡಲು ಬರುವುದಿಲ್ಲ;— ಈ ಮೊದಲಾದ ಆಡಳಿತೆಗೆ ಸಂಬಂಧಿ ಸಿದ ಅಡಚಣಿಗಳು ಉಂಟು. ಇವುಗಳನ್ನು ಉತ್ತಮ ಆಡಳಿತೆಯು ಪರಿ ಹರಿಸಬಹುದು. ಆದರೆ ಶಿಕ್ಷಣ ವಿಧಾನಕ್ಕೆ ಸಂಬಂಧಿಸಿದ ಒಂದು ಮಹತ್ವದ ಅಡಚಣಿಯೂ ಇದೆ. ಒಂದೇ ಕೇಂದ್ರ ವ್ಯವಸಾಯದ ಮುಖಾಂತರ ಏಳು ವರ್ಷಗಳ ವರೆಗೆ ಎಲ್ಲ ವಿಷಯುಗಳನ್ನೂ ಕಲಿಸಲು ಸಾಧ್ಯವೋ? ಎಲ್ಲ ವಿಷಯುಗಳನ್ನೂ ಒಂದೇ ವ್ಯವಸಾಯಕ್ಕೆ ಜೋಡಿಸುವುದು ಸಾಧ್ಯವೋ?—

ಎಂಬ ಸಂದೇಹವುಂಟಾಗುತ್ತದೆ. ಈ ಸಂದೇಹಕ್ಕೆ ಉತ್ತರ ಕೊಡುವ ಮುಂಚೆ ಇನ್ನೂ ಅನೇಕ ಪ್ರಾಮಾಣಿಕ ಪ್ರಯೋಗಗಳನ್ನು ಕೈಕೊಂಡು ಅನುಭವ ಪಡೆಯುವುದು ಉಚಿತ.

## ೭. ಶಿಕ್ಷಣದಲ್ಲಿ ತಾತ್ವಿಕ ದೃಷ್ಟಿಯ ಉಪಯೋಗ

ಇಂದಿನ ಶಾಲೆಗಳು ಕೇವಲ ಪುಸ್ತಕ ಪಾಠಗಳನ್ನು ಕಲಿಸುವ ಮನೆಗಳಾಗಿವೆಯೆಂಬ ದೂಷಣೆಯು ನಿಜವಿದೆ. ಆದರೂ ತಾತ್ವಿಕತೆಯ ಮಟ್ಟವನ್ನು ಮುಟ್ಟುವುದೇ ಶಿಕ್ಷಣ ವಿಧಾನದ ಮುಖ್ಯ ಕರ್ತವ್ಯವಾಗಿದೆ. ಶಿಕ್ಷಣವು ಅಚ್ಚರಿಯ ಮತ್ತು ವಾಸ್ತವಿಕತೆಯ ಮಟ್ಟಗಳಲ್ಲಿಯೇ ಉಳಿದದ್ದಾದರೆ ಬಹಳ ಹಾನಿಯುಂಟಾಗುವದು. ನಿಜ ವಸ್ತುಗಳು ಕಣ್ಣೆದುರಿಗೆ ಇಲ್ಲದಾಗ ಬಾಲಕರು ಅವುಗಳ ಕಾಲ್ಪನಿಕ ಚಿತ್ರಗಳನ್ನು ಕಾಣದೆ ಇದ್ದರೆ, ಅವರ ಜ್ಞಾನಾರ್ಜನೆಯ ಮಾರ್ಗದಲ್ಲಿ ಎಂತಹ ಆತಂಕವುಂಟಾದೀತೆಂಬ ಮಾತನ್ನು ಬಣ್ಣಿಸಲು ಸಾಧ್ಯವಿಲ್ಲ. ಕಾಲ್ಪನಿಗ ಚಿತ್ರಗಳು ಮತ್ತು ತಾತ್ವಿಕ ವಿಚಾರಗಳು ನಾಗರಿಕ ಜೀವನವನ್ನು ರೂಪುಗೊಳಿಸುವ ಕಾರ್ಯದಲ್ಲಿ ಮಹತ್ವದ ಪಾತ್ರವನ್ನು ವಹಿಸಿವೆ. ಆದಕಾರಣ ಅವುಗಳಿಗೆ ಶಿಕ್ಷಣ ರಂಗದಲ್ಲಿ ಕೀಳು ಸ್ಥಾನ ಕೊಡುವುದಾಗಲಿ ಇಲ್ಲವೆ ಸಂಪೂರ್ಣವಾಗಿ ತೆಗೆದುಹಾಕುವುದಾಗಲಿ ಅತ್ಯಂತ ದುರ್ದೈವದ ಸಂಗತಿಯಾದೀತು ! ತಾತ್ವಿಕ ಸಿದ್ಧಾಂತಗಳಿಂದ ತುಂಬಿದ ಶಾಸ್ತ್ರೀಯ ವಿಷಯಗಳನ್ನು ವಿದ್ಯಾರ್ಥಿಗಳು ಎಂದಿನಿಂದಲೂ ಅದೇ ರೂಪದಲ್ಲಿ ಎದುರಿಸುತ್ತ ಬಂದಿದ್ದಾರೆ. ಸಾಹಿತ್ಯದ ವಿಷಯಗಳನ್ನು ಸಹ ಅವರು ಕಲ್ಪನಾ ಶಕ್ತಿಯ ಬಲದಿಂದ ಅರ್ಥಮಾಡಿಕೊಳ್ಳುತ್ತ ಬಂದಿದ್ದಾರೆ. ಹೀಗೆ ತಾತ್ವಿಕ ಮತ್ತು ಕಾಲ್ಪನಿಕ ವಿಚಾರಗಳನ್ನು ಜಾಗರೂಕತೆಯಿಂದ ಉಪಯೋಗಿಸಿಕೊಂಡರೆ, ಜೀವನದ ಕಠಿಣ ಸನ್ನಿವೇಶಗಳನ್ನು ಊಹಿಸಿಕೊಳ್ಳಲು ಶಕ್ತರಾಗುವರು; ಮಾನವೀಯತೆಯ ಸತ್ಯಾಂಶಗಳನ್ನು ಸಹ ಗ್ರಹಿಸಕೊಳ್ಳಲು ಶಕ್ತರಾಗುವರು.

## ೮. ವಿಷಯುಗಳ ಪರಸ್ಪರ ಜೋಡಣೆ

ಇದುವರೆಗೆ ಅಭ್ಯಾಸದ ವಿಷಯಗಳನ್ನು ಬೇರೆ ಬೇರೆಯಾಗಿ ವಿವರಿಸಿದ್ದುದು ಕೇವಲ ಅನುಕೂಲತೆಗಾಗಿ. ಶಿಕ್ಷಣದಲ್ಲಿ ಅವುಗಳನ್ನ ಪೂರ್ಣವಾಗಿ

ಬೇರ್ಪಡಿಸುವುದು ಅನುಚಿತ. ಪ್ರಾಥಮಿಕ ಶಾಲೆಯಲ್ಲಿಯಂತೂ ವಿಷಯ ಗಳನ್ನು ಎಂದಿಗೂ ಕಟ್ಟುನಿಟ್ಟಾಗಿ ಬೇರ್ಪಡಿಸಕೂಡದು. ಓದು–ಬರೆಹ–ಗಣಿತಗಳೆಂಬ ಮೂರು ಸ್ಥೂಲ ವಿಭಾಗಗಳನ್ನು ಮಾಡಿದರೂ ಅವು ಒಂದ ಕ್ಕೊಂದು ಹೊಂದಿಕೊಂಡಿರಬೇಕು. ಬಾಲಕರು ತಿಳಿದುಕೊಳ್ಳಲು ತವಕಪಡುವ ಸುತ್ತುಮುತ್ತಲಿನ ವಸ್ತುಗಳ ಜ್ಞಾನವು ಅವರಿಗುಂಟಾದರೆ ಸಾಕು. ಸಣ್ಣ ಮಕ್ಕಳು ತಮ್ಮ ಪ್ರೀತಿಯ ತಂದೆಯಿಂದ ಹಲವು ಸಂಗತಿಗಳನ್ನು ಯಥಾರ್ಥ ವಾಗಿ ಕೇಳಿ ತಿಳಿದುಕೊಳ್ಳುವಂತೆ, ಅವರು ಆಯಾ ವಸ್ತುಗಳ ಜ್ಞಾನವನ್ನು ಶಿಕ್ಷಕರ ಮುಖಾಂತರ ದೊರಕಿಸಬೇಕು. ಮೊದಲಿನಿಂದ ಅಭ್ಯಾಸ ಪತ್ರಿಕೆಯ ವಿಷಯಗಳನ್ನು ಬೇರೆ ಬೇರೆಯಾಗಿ ಕಲಿಸಲು ಪ್ರಾರಂಭಿಸಬಾರದು.

ಬಾಲಕರು ದೊಡ್ಡವರಾದಮೇಲೆ ಅವರು ತರ್ಕಬದ್ಧವಾದ ಸಿದ್ಧಾಂತ ಗಳನ್ನು ಮಾಡಲು ಶಕ್ತರಾಗುತ್ತಾರೆ. ಆಗ ಅವರಿಗೆ ಆಯಾ ವಿಷಯಗಳನ್ನು ಬೇರೆ ಬೇರೆಯಾಗಿ ಕಲಿಸಬೇಕಾಗುವದು. ಆದರೂ ಹಿಂದೆ ಹೇಳಿದ ಅಭ್ಯಾಸದ ವಿಷಯಗಳನ್ನು ಶಾಲೆಯಲ್ಲಿ ಸೇರ್ಪಡೆ ಹೊಂದಲು ಅರ್ಹವಾದ ಹಲವು ಚಟು ವಟಿಕೆಗಳೆಂದೇ ಭಾವಿಸಬೇಕು. ಆಯಾ ವಿಷಯಗಳನ್ನು ಒಂದಕ್ಕೊಂದು ಹೊಂದಿಸಿ ಕಲಿಸಬಹುದು. ಇತಿಹಾಸವನ್ನು ಭೂಗೋಲದ ಸಂಗಡ ಹೊಂದಿಸ ಬಹುದು. ಗಣಿತವನ್ನು ಭೌತಿಕ ಶಾಸ್ತ್ರದ ಸಂಗಡ ಹೊಂದಿಸಬಹುದು. ಒಂದು ವಿಷಯವು ಎರಡನೆಯ ವಿಷಯದ ಜ್ಞಾನದ ಸಹಾಯದಿಂದ ಹೆಚ್ಚು ಸ್ಪಷ್ಟವಾ ಗುವ ಹಾಗಿದ್ದರೆ, ಆಗ ಅವೆರಡೂ ವಿಷಯಗಳನ್ನು ಹೊಂದಿಸಿ ಕಲಿಸುವುದು ಒಳಿತು. ಯಾವುದೊಂದು ವಿಷಯವನ್ನು ಕಲಿಸುವಾಗ ಅದು ಇತರ ವಿಷಯ ಗಳ ಸಂಗಡ ಹೇಗೆ ಹೊಂದಿಕೊಂಡಿದೆಯೆಂಬುದನ್ನು ಸಂದರ್ಭಾನುಸಾರ ಸ್ಪಷ್ಟ ಪಡಿಸಬೇಕು. ಪ್ರಾಥಮಿಕ ತರಗತಿಯಲ್ಲಾಗಲಿ ಇಲ್ಲವೆ ಮಾಧ್ಯಮಿಕ ತರಗತಿ ಯಲ್ಲಾಗಲಿ ಯಾವುದೇ ಒಂದು ವಿಷಯವನ್ನು ಕಲಿಸುವಾಗ ಅದರ ನಿರ್ಮಾಪಕ ಚಟುವಟಿಕೆಯ ಸ್ವರೂಪದರ್ಶನವನ್ನೂ, ಅದು ನಾಗರಿಕತೆಯ ಪ್ರಗತಿಯಲ್ಲಿ ವಹಿಸಿದ ಪಾತ್ರವನ್ನೂ ಬಾಲಕರ ಹೃದಯದ ಮೇಲೆ ಬಿಂಬಿಸುವಂತೆ ಮಾಡ ಬೇಕು. ಇದೇ ಶಿಕ್ಷಣ ವಿಧಾನದ ಯಶಸ್ಸನ್ನು ಅಳೆಯುವ ಮಾನದಂಡ.

## ೧೦. ವ್ಯಕ್ತಿತ್ವ ಮತ್ತು ಸಮಾಜಶೀಲತನ

ಸಾಮಾಜಿಕ ಜೀವನ ಮತ್ತು ವಿದ್ಯಾರ್ಥಿಯ ವ್ಯಕ್ತಿತ್ವ ವಿಕಾಸಗಳ ನಡುವಿನ ಸಂಬಂಧವನ್ನು ಈಗ ಹೆಚ್ಚು ವಿಶದವಾಗಿ ಪರಿಶೀಲಿಸಬೇಕಾಗಿದೆ.

### ೧. ವ್ಯಕ್ತಿತ್ವದ ಬೆಳವಣಿಗೆಯ ಮಾರ್ಗದಲ್ಲಿರುವ ಆತಂಕಗಳು

ಒಂದು ಉತ್ತಮ ಶಾಲೆಯು ಬಹುತರವಾಗಿ ವಿದ್ಯಾರ್ಥಿಗಳ ವ್ಯಕ್ತಿತ್ವದ ಮಟ್ಟವನ್ನು ಎತ್ತರಿಸುತ್ತದೆ. ಆದರೆ ಒಮ್ಮೊಮ್ಮೆ ಇಂತಹ ಶಾಲೆಯು ಚುರುಕು ಬುದ್ಧಿಯ ಬಾಲಕರ ವ್ಯಕ್ತಿತ್ವವನ್ನು ಬಲಹೀನಗೊಳಿಸುತ್ತದೆ. ಮಂದಬುದ್ಧಿಯವರಿಗೆ ಮಾಡಿದ ಒಳಿತನ್ನು ಅದು ಹೀಗೆ ಚುರುಕು ಬುದ್ಧಿಯವರಿಗೆ ಮಾಡುವ ಕೆಡಕಿನಿಂದ ಅಳಿಸಿಬಿಡುತ್ತದೆ. ಇದು ಅತ್ಯಂತ ದುರ್ದೈವದ ಸಂಗತಿ. ಇದರ ಕೆಲವು ಕಾರಣಗಳನ್ನು ಪೂರ್ಣ ಪರಿಹರಿಸುವುದು ಅಸಾಧ್ಯ. ಒಂದನೆಯದು, ಬಾಲಕನು ಸದಾ ಕಾಡುಮನುಷ್ಯನ ನಿಕಟವರ್ತಿಯಾಗಿರುವ ಸಂಗತಿ. ಬಾಲಕರನ್ನು ಸ್ವೇಚ್ಛೆಯಿಂದ ಬೆಳೆಯಗೊಟ್ಟರೆ ಅವರು ನಿಶ್ಚಯವಾಗಿ ಒಂದು ಕಾಡುಜನರ ಗುಂಪಿನ ಸ್ಥಿತಿಗೆ ಇಳಿಯುತ್ತಾರೆ. ಇಂತಹ ಗುಂಪಿನಲ್ಲಿ ಪರಂಪರಾಗತ ನಡತೆಯು ಎಲ್ಲರ ಜೀವನದ ಕ್ರೂರ ಅಧಿಪತಿಯಾಗಿರುತ್ತದೆ; ವ್ಯಂಗ ನಡತೆಯು ಅತ್ಯಂತ ನಿರ್ದಯದಿಂದ ಹತ್ತಿಕ್ಕಲ್ಪಡುತ್ತದೆ. ಹೀಗೆ ಸ್ವತಂತ್ರ ವ್ಯಕ್ತಿತ್ವದ ಬೆಳವಣಿಗೆಯು ತಡೆಯಲ್ಪಡುತ್ತದೆ. ಎರಡನೆಯದು, ಶಾಲೆಯಲ್ಲಿ ಮೇಲಾಟದ ಭಾವನೆಯನ್ನು ಅತಿಯಾಗಿ ಉಪಯೋಗಿಸುವ ಸಂಗತಿ. ಈ ಮೇಲಾಟದ ಭಾವನೆಯು ಇಡೀ ಜಾಗತಿಕ ಜೀವನವನ್ನೇ ಇಂದು ಜರ್ಜರಿತ ಮಾಡಿದೆ. ಇದೊಂದು ಮಹಾ ದೋಷ. ಆದರೆ ಈ ಎರಡು ಕಾರಣಗಳಿಗಿಂತಲೂ ಆಳವಾದ ಇನ್ನೊಂದು ಕಾರಣವಿದೆ. ಸಮಾಜ ಮತ್ತು ವ್ಯಕ್ತಿಗಳ ನಡುವೆ ಇರಬೇಕಾದ ಸಂಬಂಧದ ಬಗ್ಗೆ ಇರುವ ತಪ್ಪು ವಿಚಾರಗಳೇ ಆ ಕಾರಣ. ಈ ವಿಚಾರಗಳು ಯಾವಾಗಲೂ ಶಿಕ್ಷಣದ ಹಿನ್ನೆಲೆಯಲ್ಲಿರುತ್ತವೆ. ಅವೇ ವ್ಯಕ್ತಿತ್ವವನ್ನು ಬಲಹೀನಗೊಳಿಸಲು ಕಾರಣವಾಗುತ್ತವೆ. ಸಮಾಜಶೀಲ ವರ್ತನೆಯೆಂದರೆ ವ್ಯಕ್ತಿತ್ವದ ಬಲಿದಾನವೆಂದು ಹಲವರು ಗುಪ್ತವಾಗಿ ನಂಬುತ್ತಾರೆ; ಕೆಲವರು ಬಹಿರಂಗವಾಗಿ ಸಾರುತ್ತಾರೆ.

ಈ ಮಾತಿನ ಅಸತ್ಯತೆಯನ್ನು ಒಂದನೆಯ ಪ್ರಕರಣದಲ್ಲಿಯೇ ತೋರಿಸಿದ್ದಾಗಿದೆ. ವ್ಯಕ್ತಿತ್ವದ ಪರಿಪೂರ್ಣತೆಯೇ ಸಮಾಜಶೀಲ ನಡತೆಯ ತಳಹದಿಯೆಂದು ಸಿದ್ಧ ಮಾಡಲಾಗಿದೆ.

## ೨. ಸಮಾಜಶೀಲ ಮತ್ತು ಸಮಾಜವಿರೋಧಿ ನಡತೆಗಳಲ್ಲಿರುವ ಅಂತರ

"ಸ್ವಾರ್ಥಪರ ನಡತೆಯು ಸಮಾಜಶೀಲ ಪ್ರವೃತ್ತಿಗೆ ವಿರುದ್ಧವಾಗಿದೆ; ಸಾಮಾಜಿಕ ನಡತೆಯು ಸಮಾಜಶೀಲ ಪ್ರವೃತ್ತಿಯಿಂದ ಹುಟ್ಟುತ್ತದೆ."— ಎಂಬ ತಪ್ಪು ಭಾವನೆಯು ಹಲವರಲ್ಲಿ ಉಂಟು. ಅತ್ಯಂತ ಹೀನ ನಡತೆಯಲ್ಲಿಯೂ ಸಹ ಸಾಮಾಜಿಕ ಅಂಶಗಳು ಎದ್ದು ಕಾಣುತ್ತವೆ. ಉದಾಹರಣೆಗಾಗಿ ಒಬ್ಬ ಮೋಸಗಾರನ ಕೃತಿಯನ್ನು ತೆಗೆದುಕೊಳ್ಳಬಹುದು. ಅವನು ತನ್ನ ಮೋಸದ ಕೃತಿಯಲ್ಲಿ ಜಯಶೀಲನಾಗಬೇಕಾದರೆ, ಅವನು ಜನರ ದೌರ್ಬಲ್ಯಗಳ ಲಾಭ ತೆಗೆದುಕೊಳ್ಳಬೇಕಾಗುತ್ತದೆ. ಹಾಗೆ ಮಾಡಲು ಅವನಲ್ಲಿ ಸಮಾಜಶೀಲ ನಡತೆಯ ಚಾತುರ್ಯವಿರಬೇಕಾಗುತ್ತದೆ. ಇದರಂತೆ ಅತ್ಯಂತ ಶ್ರೇಷ್ಠ ನಡತೆಯಲ್ಲಿಯೂ ಸಹ ಸ್ವಾರ್ಥದ ಅಂಶವು ಕಂಡುಬರುತ್ತದೆ. ಒಬ್ಬ ಸಾಮಾಜಿಕ ಕಾರ್ಯಕರ್ತನ ಉದಾಹರಣೆಯನ್ನು ತೆಗೆದುಕೊಳ್ಳಬಹುದು. ಒಂದು ಅನಾರೋಗ್ಯಕರ ಪ್ರದೇಶವಿದೆ; ಅಲ್ಲಿ ಕಾಡುಜನರು ವಾಸವಾಗಿದ್ದಾರೆ; ಆ ಜನರಿಗೆ ನಾಗರಿಕತೆಯ ಸಂಪರ್ಕವಾಗಿಲ್ಲ; ಅವರ ಮಧ್ಯದಲ್ಲಿ ನಿಂತು ಒಬ್ಬ ಸುಸಂಸ್ಕೃತ ಸಾಮಾಜಿಕ ಕಾರ್ಯಕರ್ತನು ಅವರ ಏಳ್ಗೆಗಾಗಿ ಹೋರಾಡುತ್ತಿರುವನೆಂದು ತಿಳಿಯಿರಿ. ಇಂತಹ ಕಾರ್ಯಕರ್ತನು ಜೀವನದ ಅನೇಕ ಸುಖಾನುಭವಗಳಿಂದ ನಿರ್ಲಿಪ್ತನಾಗಿದ್ದುದು ನಿಜ. ಆದರೆ ಅವನು ತನ್ನತನವನ್ನು ಕಳೆದುಕೊಂಡಿರುವನೆಂದು ಹೇಳಬಹುದೇ ? ಎಂದೂ ಇಲ್ಲ. ಅವನ ಉಚ್ಚತಮ ವ್ಯಕ್ತಿತ್ವವು ಪ್ರತಿಕ್ಷಣ ಪ್ರಕಟವಾಗುತ್ತಿರುತ್ತದೆ.

ಈ ಉದಾಹರಣೆಗಳು ಸಮಾಜಶೀಲ ಮತ್ತು ಸಮಾಜವಿರೋಧೀ ನಡತೆಗಳ ನೈಜ ಸ್ವಭಾವಗಳನ್ನು ಚಿತ್ರಿಸುತ್ತವೆ. ಇತರರನ್ನು ಕೇವಲ ತನ್ನ ಹಿತದ ಸಲುವಾಗಿ ಇರುವ ಸಾಧನಗಳಂತೆ ಉಪಯೋಗಿಸಿಕೊಳ್ಳುವ ನಡತೆಯು ಸಮಾಜವಿರೋಧೀ ನಡತೆಯು. ಇತರರು ನಿರ್ಮಿಸಿದ ವಸ್ತುಗಳನ್ನು ತಾನು

ಬಳಸಿಕೊಂಡು, ಇತರರಿಗೆ ಉಪಯೋಗಬೀಳುವ ವಸ್ತುಗಳನ್ನು ತಾನು ನಿರ್ಮಿಸಿಕೊಡದೆ ಇರುವುದು ಸಮಾಜವಿರೋಧೀ ನಡತೆಯು. ತಾನು ಧನಿಕನಾಗಬೇಕೆಂದು ಇತರರನ್ನು ಅರ್ಥವಿಲ್ಲದ ದುಡಿಮೆಯಲ್ಲಿ ತೊಡಗಿಸುವ ಸಿರಿವಂತನ ನಡತೆ, ಮಕ್ಕಳ ಮಮತೆಯನ್ನು ತನ್ನ ಐಷಾರಾಮಿನಸಲುವಾಗಿ ಉಪಯೋಗಿಸಿಕೊಳ್ಳುವ ತಾಯಿಯ ನಡತೆ, ತನ್ನ ಅಭಿರುಚಿಯ ತೃಪ್ತಿಯಲ್ಲಿಯೇ ತನ್ಮಯನಾದ ಕಲಾವಿದನ ನಡತೆ, ತನ್ನ ಸಂಶೋಧನೆಗಳನ್ನು ಗುಪ್ತವಾಗಿಡುವ ವಿಜ್ಞಾನಿಯ ನಡತೆ, ಮೊದಲಾದವುಗಳು ನೀಚ ಮತ್ತು ಹಿಂಸಾತ್ಮಕ ನಡತೆಗಳ ಪಂಕ್ತಿಯಲ್ಲಿಯೇ ಬರುತ್ತವೆ.

ಇದಕ್ಕೆ ಪ್ರತಿಯಾಗಿ, ಸಾಮಾಜಿಕ ಅಂಶಗಳಿಂದ ತನ್ಮಯವಾದ ವ್ಯಕ್ತಿತ್ವದಿಂದ ಹೊರಬೀಳುವ ನಡತೆಯು ಯಾವಾಗಲೂ ಸಮಾಜಶೀಲವಾಗಿರುತ್ತದೆ. ವ್ಯಕ್ತಿಜೀವನದ ಪರಿಪೂರ್ಣತೆಯಿಂದ ಉದ್ಭವಿಸಿದ ನಡತೆಯು ಸದಾ ಸಮಾಜಶೀಲವಾಗಿರುತ್ತದೆ.

## ೩. ವ್ಯಕ್ತಿತ್ವದಿಂದ ಹೊರಹೊಮ್ಮಿದ ನಡತೆಯು ಸಾಮಾಜಿಕ ಉಪಯುಕ್ತತೆ

ನಡತೆಯ ಒಳ್ಳೆಯತನ ಮತ್ತು ಕೆಟ್ಟತನಗಳನ್ನು ಸಾಮಾಜಿಕ ಉಪಯುಕ್ತತೆಯ ದೃಷ್ಟಿಯಿಂದ ಅಳೆಯಬೇಕೆಂದು ಕೆಲವರು ಹೇಳುತ್ತಾರೆ. ಈ ಮಾನದಂಡವು ನಿತ್ಯದ ಬಳಕೆಗೆ ಒಳ್ಳೆಯದಾಗಿದ್ದರೂ ಅಂತಿಮ ಮಾನದಂಡವಾಗಲಾರದು. ಏಕೆಂದರೆ, ಅತ್ಯಂತ ಮಹತ್ವದ ಕೃತಿಗಳ ಸಾಮಾಜಿಕ ಹಿತಾಹಿತಗಳ ಬೆಲೆಯನ್ನು ಆಗಿಂದಾಗ್ಗೆ ಗೊತ್ತುಹಚ್ಚುವುದು ಕಠಿಣ. ಒಬ್ಬ ವ್ಯಕ್ತಿಯು ಕಾಳಿದಾಸನ ಕಾಲಮಾನವನ್ನು ಗೊತ್ತು ಹಚ್ಚುವ ಕಾರ್ಯದಲ್ಲಿ ತೊಡಗುವುದು ಒಳಿತೋ, ಇಲ್ಲವೆ ಹೊಲಮನೆಯ ಕಾರ್ಯದಲ್ಲಿ ತೊಡಗುವುದು ಒಳಿತೋ, ಎಂಬ ಸಮಸ್ಯೆಗಳ ಸಾಮಾಜಿಕ ಹಿತಾಹಿತಗಳನ್ನು ಯಾರು ನಿರ್ಧರಿಸಬಲ್ಲರು ? ಇಂತಹ ಸಮಸ್ಯೆಗಳನ್ನು ಕೂಲಂಕಷವಾಗಿ ವಿವೇಚಿಸಿದಾಗ ಮನುಷ್ಯನ ನಡತೆಯನ್ನು ಉಪಯುಕ್ತತೆಯ ಮಾನದಂಡದಿಂದ ಅಳೆಯಲು ಬರುವುದಿಲ್ಲೆಂದು ಕಂಡುಬರುತ್ತದೆ. ಒಂದು ಕಲಾಕೃತಿ ಮತ್ತು ಮನುಷ್ಯ ಜೀವಿಗಳೆರಡರಲ್ಲಿಯೂ ಸಾಮ್ಯವಿದೆ. ಒಂದು ಕಲಾಕೃತಿಯ

ಬೆಲೆಯನ್ನು ಅದರ ವ್ಯಕ್ತಿತ್ವದಮೇಲಿಂದ ನಿರ್ಧರಿಸಲಾಗುತ್ತದೆ. ಅದರಂತೆ ಮನುಷ್ಯನ ನಡತೆಯ ಬೆಲೆಯನ್ನು ಸಹ ಅವನ ವ್ಯಕ್ತಿತ್ವದಮೇಲಿಂದ ನಿರ್ಧರಿಸಬೇಕು.

ಮಾನವನ ಚಿತ್ತವೆತ್ತ ಶರೀರವು ತನಗೆ ಲಭ್ಯವಿದ್ದ ಸಾಮಗ್ರಿಗಳನ್ನು ಬಳಸಿಕೊಂಡು ತನ್ನ ಸ್ವತಂತ್ರ ಕೃತಿಗಳ ರೂಪದಿಂದ ವ್ಯಕ್ತಿತ್ವವನ್ನು ಹೊರ ಗೆಡಹುತ್ತದೆ. ಆದುದರಿಂದ, ನಿಸರ್ಗದತ್ತ ಗುಣವು ಯಾವ ಅನುಪಾನವೂ ಇಲ್ಲದೆ ಅಸ್ತವ್ಯಸ್ತವಾಗಿ ಬೆಳೆಯದಂತೆ ನೋಡಿಕೊಳ್ಳುವ ಹೊಣೆಯೂ ವ್ಯಕ್ತಿಯಮೇಲಿದೆ. ಅವನು ತನ್ನ ನಿರ್ಮಾಪಕ ಶಕ್ತಿಗಳನ್ನು ಸದುಪಯೋಗ ಪಡಿಸಿಕೊಳ್ಳಬೇಕು. ತನಗೆ ನಿಲುಕಬಹುದಾದ ಉಚ್ಚತಮ ವ್ಯಕ್ತಿತ್ವವನ್ನು ಅವನು ರೂಪಿಸಿಕೊಳ್ಳಬೇಕು. ಇದೇ ಅವನ ಅಂತಿಮ ಗುರಿ. ಅಂದಮೇಲೆ, ಒಂದು ಕೃತಿಯು ಹೊರಬೀಳುವ ಮೊದಲು ಅದರ ಬೆಲೆಯನ್ನು ಅಳೆಯಲು ಬರುವುದಿಲ್ಲ; ಒಮ್ಮೊಮ್ಮೆ ಕೃತಿಯು ಹೊರಬಿದ್ದನಂತರವೂ ಅದರ ಬೆಲೆಯು ಅದೇ ಕ್ಷಣದಲ್ಲಿ ಮನುಷ್ಯಬುದ್ಧಿಗೆ ಹೊಳೆಯಲಿಕ್ಕಿಲ್ಲ. ಇಲ್ಲಿ ಕೀಟ್ಸ್ ಎಂಬ ಆಂಗ್ಲಕವಿಯ ಉದಾಹರಣೆಯನ್ನು ತೆಗೆದುಕೊಳ್ಳಬಹುದು. ಕೀಟ್ಸನು ರಸಾಯನಗಳ ವ್ಯವಹಾರವನ್ನು ತ್ಯಜಿಸಿ ಕಾವ್ಯ ನಿರ್ಮಾಣ ಕಾರ್ಯಗಳನ್ನು ಕೈಕೊಂಡನು. ಆಗ ಆ ಕಾಲದ ಪ್ರಸಿದ್ಧ ವಿಮರ್ಶಕರು ಕೀಟ್ಸನು ಹಾಗೆ ಮಾಡಿದುದು ಒಳಿತಾಗಲಿಲ್ಲವೆಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಕೀಟ್ಸನು ಕಾವ್ಯ ನಿರ್ಮಾಣದಲ್ಲಿ ತೊಡಗಿ ಜಗತ್ತಿಗೆ ಮಹದುಪಕಾರ ಮಾಡಿದ್ದಾನೆಂದು ಇಂದು ಎಲ್ಲರೂ ತಿಳಿಯುತ್ತಾರೆ. ಆದಕಾರಣ ವ್ಯಕ್ತಿತ್ವದರ್ಶನವು ಮಾನ ವನ ನಡತೆಯ ಬೆಲೆಯನ್ನು ನಿರ್ಧರಿಸಬಲ್ಲ ಅಂತಿಮ ಮಾನದಂಡವೆಂದು ಗ್ರಹಿಸಬಹುದು. ವ್ಯಕ್ತಿತ್ವಕ್ಕೂ ಮತ್ತು ಸಾಮಾಜಿಕ ಉಪಯುಕ್ತತೆಯ ತತ್ವಕ್ಕೂ ನಡುವೆ ಯಾವ ವೈಷಮ್ಯವೂ ಇಲ್ಲ. ಅವು ಒಂದಕ್ಕೊಂದು ಹೊಂದಿಕೊಂಡಿವೆ.

## ೪. ಸಮಾಜಸೇವೆಯ ಶಿಕ್ಷಣ

ವಿದ್ಯಾರ್ಥಿಗಳನ್ನು ಸಮಾಜಶೀಲರನ್ನಾಗಿ ಮಾಡುವುದೇ ಶಾಲೆಯ ಮುಖ್ಯ ಕರ್ತವ್ಯವೆಂಬ ವಿಚಾರ ಮತ್ತು ವ್ಯಕ್ತಿತ್ವ ವಿಕಾಸವೇ ಶಾಲೆಯ ಗುರಿ

ಯೆಂಬ ವಿಚಾರಗಳೆರಡೂ ಒಂದಕ್ಕೊಂದು ಪೋಷಕವಾಗಿವೆ. ಇದು ಮೇಲಿನ ವಿವೇಚನೆಯಿಂದ ಹೊರಬೀಳುವ ಸಿದ್ಧಾಂತ. ವ್ಯಕ್ತಿತ್ವದ ಹೆಗ್ಗುರುತು ವ್ಯಂಗ ತನವಲ್ಲ, ಪ್ರಾಮಾಣಿಕತನ. ಪ್ರಾಮಾಣಿಕರಾದವರಿಗೆಲ್ಲ ಉಚ್ಚತಮ ವ್ಯಕ್ತಿತ್ವವು ದೊರೆಯುತ್ತದೆ. ಆದರೆ ಪ್ರಾಮಾಣಿಕರಾಗಬೇಕಾದರೆ ಬಾಲಕರು ತಮ್ಮ ಸ್ವಭಾವಕ್ಕನುಗುಣವಾದ ಚಟುವಟಿಕೆಗಳಲ್ಲಿ ನಿರತರಾಗಲು ಸ್ವತಂತ್ರರಿರಬೇಕು. ಆದುದರಿಂದ, ವಿದ್ಯಾರ್ಥಿಗಳಿಗೆ ಪ್ರಾಮಾಣಿಕರಾಗಲು ಅವಕಾಶ ಕೊಡುವುದೇ ನಿಜವಾದ ಸಮಾಜಸೇವೆಯ ಶಿಕ್ಷಣವೆಂದು ಹೇಳಬಹುದು. ಪ್ರತಿಯೊಬ್ಬ ಬಾಲಕನೂ ಶಾಲೆಯ ಜೀವನದಿಂದ ತನ್ನ ನಿಸರ್ಗದತ್ತ ಗುಣಕ್ಕೆ ಪೋಷಕವಾದುದನ್ನು ತೆಗೆದುಕೊಳ್ಳಲು ಸ್ವತಂತ್ರನಿರಬೇಕು. ಪ್ರತಿಯೊಬ್ಬ ಬಾಲಕನೂ ತನ್ನ ನೈಜ ಸ್ವಭಾವದಿಂದ ಹೊರಬೀಳುವ ಪ್ರಾಮಾಣಿಕ ಕೃತಿಯಿಂದ ಸಾರ್ವಜನಿಕ ಜೀವನವನ್ನು ಸಮೃದ್ಧಿಗೊಳಿಸಲು ಸ್ವತಂತ್ರನಿರಬೇಕು. ಹೀಗೆ ಬಾಲಕರ ಸ್ವತಂತ್ರ ಚಟುವಟಿಕೆಗಳಿಗೆ ಉತ್ತೇಜನಕೊಡುವ ಶಾಲೆಯೇ ಆದರ್ಶ ಶಾಲೆ. ಇಂತಹ ಶಾಲೆಯೇ ತನ್ನ ಬಾಲಕರಿಗೆ ನಿಜವಾದ ಸಮಾಜಸೇವೆಯ ಶಿಕ್ಷಣವನ್ನು ಕೊಡಬಲ್ಲದು.



# ೧೧. ಶಾಲೆ ಮತ್ತು ಸಮಾಜ

ಶಾಲೆಯು ಒಂದು ಸಮಾಜ; ಆದರೆ ಅದು ಒಂದು ವಿಶಿಷ್ಟ ಸಮಾಜ. ಶಾಲೆಯ ಸಮಾಜ ಆದಷ್ಟು ಸ್ವಾಭಾವಿಕವಾಗಿರಬೇಕು. ಶಾಲೆಯ ಜೀವನ ಮತ್ತು ಬಾಹ್ಯ ಜೀವನಗಳ ನಡುವೆ ಪರಸ್ಪರ ಹೊಂದಿಕೆಯಿರಬೇಕು. ಬಾಲಕರ ಬುದ್ಧಿ ಬಲಗಳ ವಿಕಾಸಕ್ಕೆ ಅಲ್ಲಿ ಪೂರ್ಣ ಅವಕಾಶವಿರಬೇಕು. ಕಲಿಯುವವರು ಮತ್ತು ಕಲಿಸುವವರು ಪರಸ್ಪರ ನಲಿದು ಕಲೆದು ಪರಿಪೂರ್ಣ ಜೀವನ ಸಾಗಿಸುತ್ತಿರಬೇಕು. ಶಾಲೆಯಲ್ಲಿ ಕೇವಲ ರೂಢಿಯ ನಡತೆಗಳಿಗಷ್ಟೇ ಸ್ಥಾನವಿರದೆ ವಿಶಾಲಾತ್ಮಕ ಆದರ್ಶ ನಡತೆಗಳಿಗೆಲ್ಲ ಸ್ಥಾನವಿರಬೇಕು. ವಿಶಾಲ ಜಗತ್ತಿನ ಹಿತಾಹಿತಗಳಿಂದ ಶಾಲೆಯ ಜೀವನವು ಬೇರ್ಪಡದೆ, ಅದರ ಬೌದ್ಧಿಕ ಮತ್ತು ಭಾವನಾತ್ಮಕ ಜೀವನದಲ್ಲಿ ಸೇರ್ಪಡೆಯಾಗಬೇಕು.

## ೧. ಶಾಲೆಯು ಆದರ್ಶ ರಾಷ್ಟ್ರೀಯ ಸಂಸ್ಥೆ

ಇನ್ನೊಂದು ದೃಷ್ಟಿಯಿಂದ ನೋಡಿದರೆ, ಶಾಲೆಯು ಒಂದು ಕೃತ್ರಿಮ ಸಮಾಜವಾಗಿರಬೇಕು. ಶಾಲೆಯು ಬಾಹ್ಯ ಜಗತ್ತಿನ ಜೀವನದ ಉತ್ತಮ ಅಂಶಗಳನ್ನಷ್ಟೇ ಪ್ರತಿಬಿಂಬಿಸಬೇಕು. ಶಾಲೆಗಳು ರಾಷ್ಟ್ರೀಯ ಜೀವನದ ಪ್ರತೀಕಗಳು. ಅವು ರಾಷ್ಟ್ರೀಯ ಸಾಂಸ್ಕೃತಿಕ ಬಲವನ್ನು ಧೃಡಪಡಿಸಬೇಕು; ರಾಷ್ಟ್ರೀಯ ಇತಿಹಾಸದ ಪರಂಪರೆಯನ್ನು ಕಾಯ್ದುಕೊಳ್ಳಬೇಕು; ಜನತೆಯು ರಾಷ್ಟ್ರದ ಗತವೈಭವವನ್ನು ಕಂಡುಕೊಳ್ಳುವಂತೆ ಮಾಡಬೇಕು; ರಾಷ್ಟ್ರದ ಭಾವೀ ಜೀವನದ ಉತ್ತಮತೆಯನ್ನು ಸಾಧಿಸಬಲ್ಲ ಉಪಕರಣಗಳಾಗಬೇಕು. ಶಾಲೆಗಳ ಮುಖಾಂತರವೇ ರಾಷ್ಟ್ರವು ತನ್ನ ಗತಕಾಲದ ಘನತೆಯ ಪರಂಪರೆಯಿಂದ ಸ್ಫೂರ್ತಿಯನ್ನು ಪಡೆದುಕೊಳ್ಳಬಲ್ಲದು; ತನ್ನ ಕೀರ್ತಿವೆತ್ತ ಪುತ್ರರತ್ನರ ಹೊಂಗನಸುಗಳಲ್ಲಿ ಸಮಭಾಗಿಯಾಗಬಲ್ಲದು; ತನ್ನ ಆದರ್ಶಗಳಲ್ಲಿರುವ ದೋಷಗಳನ್ನು ಸ್ವವಿಮರ್ಶೆಯಿಂದ ಪರಿಹರಿಸಿಕೊಳ್ಳಬಲ್ಲದು. ವಿದ್ಯಾಲಯಗಳಲ್ಲಿ ಶೋಧವಾಗುವ ಹೊಸ ಸಂಶೋಧನೆಗಳ ಬಲದಿಂದ ರಾಷ್ಟ್ರವು ಹೊಸ ಬಗೆಯ ಜೀವನ ಕ್ರಮವನ್ನು ರೂಪಿಸಿಕೊಳ್ಳಬಲ್ಲದು.

## ೨. ನಾಗರಿಕತ್ವದ ಶಿಕ್ಷಣ

ಉತ್ತಮ ನಾಗರಿಕರನ್ನು ತರಬೇತುಗೊಳಿಸುವುದೇ ಶಿಕ್ಷಣದ ಉದ್ದೇಶವೆಂದು ಇತ್ತೀಚಿಗೆ ಬಹು ಜನರು ಹೇಳುತ್ತಿದ್ದಾರೆ. ಇದು ಸಾಧುವಾದುದೆಂದು ಶಿಕ್ಷಕರು ಸಹ ಒಪ್ಪಿಕೊಂಡಿದ್ದಾರೆ. ಶಾಲೆಯ ಬಗ್ಗೆ ಹೇಳಿದ ಮೇಲಿನ ಮಾತುಗಳು ಈ ವಿಷಯಕ್ಕೆ ಸಂಬಂಧಿಸಿವೆ. ಪೌರನೀತಿಯೆಂಬ ಒಂದು ಹೊಸ ವಿಷಯುವನ್ನು ಅಭ್ಯಾಸಪತ್ರಿಕೆಯಲ್ಲಿ ಸೇರಿಸಿದ ಮಾತ್ರದಿಂದ ನಾಗರಿಕತ್ವದ ಶಿಕ್ಷಣವನ್ನು ಕೊಟ್ಟ ಹಾಗೆ ಆಗುವುದಿಲ್ಲ. ಶಾಲೆಯ ವಿವಿಧ ಚಟುವಟಿಕೆಗಳು, ಶಿಸ್ತು, ಆಯಾ ವಿಷಯಗಳನ್ನು ಕಲಿಸುವ ರೀತಿ ಮೊದಲಾದವುಗಳ ಮುಖಾಂತರ ನಾಗರಿಕತ್ವದ ಭಾವನೆಯು ಬಾಲಕರಲ್ಲಿ ಸಹಜವಾಗಿ ಉಂಟಾಗಬೇಕು. ಧ್ವನಿವಾಹಕ ಯಂತ್ರ, ವಿಮಾನ, ಆಕಾಶವಾಣಿ ಮೊದಲಾದವುಗಳನ್ನು ತಿಳಿದುಕೊಳ್ಳಲು ಸಣ್ಣಮಕ್ಕಳು ಬಹಳ ಆತುರರಾಗಿರುತ್ತಾರೆ. ಆದರೆ, ಕೇವಲ ಇಂತಹ ಸಂಗತಿಗಳನ್ನೇ ಅವರಿಗೆ ಕಲಿಸುತ್ತ ಹೋಗುವುದು ಉಚಿತವಲ್ಲ. ಆದರೂ ಕೆಲವೊಂದು ಪ್ರಸಂಗಗಳಲ್ಲಿ ವಿಜ್ಞಾನ, ಗಣಿತ ಮೊದಲಾದ ವಿಷಯುಗಳನ್ನು ಕಲಿಸುವಾಗ, ಇಂದಿನ ಜೀವನದಲ್ಲಿ ಪ್ರಮುಖ ಪಾತ್ರ ವಹಿಸಿದ ವಸ್ತುಗಳ ಉದಾಹರಣೆಗಳನ್ನು ತೆಗೆದುಕೊಳ್ಳುವುದು ಒಳ್ಳೆಯದು. ಇತಿಹಾಸವನ್ನು ಕಲಿಸುವಾಗ ಯಾವ ಉದ್ದೇಶ ಸಾಧನೆಗಾಗಿ ವಿವಿಧ ರಾಜ್ಯಗಳು ಜನ್ಮವೆತ್ತಿವೆಯೆಂಬುದನ್ನು ತೋರಿಸಿಕೊಡಬೇಕು. ಭೂಗೋಲನ್ನು ಕಲಿಸುವಾಗ ಜೀವನದ ಸೌಲಭ್ಯಕ್ಕಾಗಿ ಹೇಗೆ ಹೇಗೆ ಮಾನವ ಜನಾಂಗಗಳು ನೈಸರ್ಗಿಕ ಸಂಪತ್ತನ್ನು ಬಳಸಿಕೊಂಡಿವೆಯೆಂಬುದನ್ನು ತೋರಿಸಿಕೊಳ್ಳಬೇಕು. ಸಾಹಿತ್ಯವನ್ನು ಕಲಿಸುವಾಗ ಮಾನವನು ಹೇಗೆ ಪ್ರಗತಿ ಹೊಂದಿದ್ದಾನೆ, ತನ್ನ ಹಿತಸಂಬಂಧಗಳ ರಕ್ಷಣೆಗಾಗಿ ಹೇಗೆ ಸಹಕರಿಸಿದ್ದಾನೆ, ಮತ್ತು ಹಲವುಸಲ ಅಸಹಕರಿಸಿ ಹೇಗೆ ಅಧೋಗತಿಗೆ ಮುಟ್ಟಿದ್ದಾನೆಯೆಂಬ ಸಂಗತಿಗಳನ್ನು ಬಾಲಕರ ಮನಸ್ಸಿನಮೇಲೆ ಬಿಂಬಿಸಬೇಕು. ಹೀಗೆ ಮಾಡುವುದರಿಂದ ಬಾಲಕರಲ್ಲಿ ನಾಗರಿಕತ್ವದ ಭಾವನೆಯು ತೀವ್ರ ಅಂಕುರಿಸುವುದು.

## ೩. ಬಾಹ್ಯಜೀವನದ ಸಂಪರ್ಕದ ಅವಶ್ಯಕತೆ

ಶಾಲೆಯ ಶಿಸ್ತು ಮತ್ತು ಜೀವನಗಳ ಪರಿಣಾಮವಾಗಿ ಬಾಲಕರು ತಮ್ಮ ನಿತ್ಯದ ಶೀಲ ಸ್ವಭಾವಗಳನ್ನು ಕಲಿತುಕೊಳ್ಳುತ್ತಾರೆ. ಆದುದರಿಂದ,

ಶಾಲೆಯ ಜೀವನವು ಸುಗಮವಾಗಿದ್ದರೆ ಬಾಲಕರಿಗೆ ಉತ್ತಮ ನಾಗರಿಕ ಜೀವನದ ಕಲ್ಪನೆ ಬರುತ್ತದೆ. ಆದರೆ ಶಾಲೆಯ ನಾಗರಿಕತ್ವ ಮತ್ತು ಬಾಹ್ಯ ಜೀವನದ ನಾಗರಿಕತ್ವಗಳಲ್ಲಿ ಮಹದಂತರವಿದೆ. ಶಾಲೆಯಿಂದ ಜಗಜೀವನ ವಲ್ಲಿ ಅಡಿಯಿಡುತ್ತಿರುವ ಬಾಲಕನು ಸುಲಭವಾಗಿ ಆ ಜೀವನದಲ್ಲಿ ಬೆರೆಯು ವಂತಾಗಬೇಕು. ಹೀಗೆ ಬೆರೆಯಬೇಕಾದರೆ ಅವನಲ್ಲಿ ಜಗಜೀವನದ ಕಾರ್ಯ, ಉದ್ದೇಶ, ಹೊಣೆಗಾರಿಕೆ ಮತ್ತು ಬಲಿದಾನ ಮೊದಲಾದವುಗಳ ಬಗ್ಗೆ ಪವಿತ್ರ ಸಹಾನುಭೂತಿಯಿರಬೇಕು. ಜಗಜೀವನದ ಬಗ್ಗೆ ನಿಜವಾದ ಜ್ಞಾನ ಮತ್ತು ಸಹಾನುಭೂತಿಗಳನ್ನು ಬಾಲಕರಲ್ಲಿ ಉಂಟುಮಾಡಬೇಕಾದರೆ ಶಾಲೆ ಮತ್ತು ಬಾಹ್ಯ ಜಗತ್ತಿನ ನಡುವೆ ನೇರವಾದ ಸಂಪರ್ಕವಿರಬೇಕು. ಇಲ್ಲಿ ಒಬ್ಬ ಜಾಣ ಇತಿಹಾಸ ಶಿಕ್ಷಕನ ಶಿಕ್ಷಣ ರೀತಿಯ ಉದಾಹರಣೆ ತೆಗೆದುಕೊಳ್ಳಬಹುದು : ಔದ್ಯೋಗಿಕ ಸಮಸ್ಯೆಗಳನ್ನು ಬಾಲಕರಿಗೆ ತಿಳಿಸಿಕೊಡುವ ಪ್ರಸಂಗ ಅವನಿಗೆ ಒದಗಿದಾಗ, ಅವನು ಬಾಲಕರನ್ನು ಒಂದು ಔದ್ಯೋಗಿಕ ಕಾರಖಾನೆಗಳಿರುವ ಸ್ಥಳಕ್ಕೆ ಕರೆದುಕೊಂಡು ಹೋಗುವನು. ಅಲ್ಲಿ ಆ ಸಮಸ್ಯೆಗಳ ವಿವೇಚನೆ ಯನ್ನು ಸಜೀವವಾಗಿ ಮಾಡುವನು. ಇದಲ್ಲದೆ, ಕೆಲವು ಸಲ ಅವನು ಕೂಲಿ ಕಾರ ಮುಖಂಡರು ಶಾಲೆಯ ಚರ್ಚಾಕೂಟಕ್ಕೆ ಭೆಟ್ಟಿ ಕೊಟ್ಟು ಬಾಲಕ ರನ್ನುದ್ದೇಶಿಸಿ ಕೆಲವು ಮಾತುಗಳನ್ನು ಹೇಳಿ ಹೋಗಲು ಆಮಂತ್ರಣ ಕೊಡಬಹುದು. ಹೀಗೆ ಮಾಡುವುದು ಬಾಲಕರಿಗೆ ನಾಗರಿಕತ್ವವನ್ನು ಕಲಿಸುವ ಉತ್ತಮ ರೀತಿ. ಆದರೆ ಹೀಗೆ ಮಾಡುವಾಗ ರಾಜಕೀಯ ಪಕ್ಷ ಪಂಗಡಗಳ ಅನಿಷ್ಟ ಪ್ರಚಾರಕ್ಕೆ ಇಂಬುಗೊಡದಂತೆ ಜಾಗರೂಕತೆ ವಹಿಸಬೇಕು.

ಪ್ರಾಥಮಿಕ ಶಾಲೆಗಳಲ್ಲಿ ಪುಸ್ತಕದ ಪಾಠಗಳಿಗೆ ಜೀವಕಳೆಯನ್ನು ತುಂಬುವ ಅವಶ್ಯಕತೆ ಬಹಳವಿದೆ. ಈ ದೃಷ್ಟಿಯಿಂದ ಕೆಲವು ಸಲ ಅಂಚೆಯ ಸಿಪಾಯಿ, ಬೀದಿಯ ಕಸಗೂಡಿಸುವವ, ಒಕ್ಕಲಿಗ, ನೇಕಾರ, ಬಡಿಗ ಮೊದ ಲಾದವರನ್ನು ಶಾಲೆಗೆ ಕರೆತಂದು ಅವರ ಕಡೆಯಿಂದ ತಮ್ಮ ತಮ್ಮ ಕಾರ್ಯ ಗಳ ಬಗ್ಗೆ ಸಂಭಾಷಣೆಗಳನ್ನು ಕೊಡಿಸುವುದು ಒಳ್ಳೆಯದು. ಗಾಯನ, ನೃತ್ಯ, ಕಲಾಕೌಶಲ್ಯ ಮೊದಲಾದ ಸಾಮೂಹಿಕ ಕ್ರೀಡಾತ್ಮಕ ಚಟುವಟಿಕೆ ಗಳಿಗೆ ಅವಕಾಶಕೊಡಲು ವಿದ್ಯಾರ್ಥಿಕೂಟಗಳನ್ನು ಏರ್ಪಡಿಸಬೇಕು.

ಇಂತಹ ವಿದ್ಯಾರ್ಥಿಕೂಟಗಳ ಚಟುವಟಿಕೆಗಳಿಂದ ನಾಗರಿಕತ್ವದ ಭಾವನೆಯು ಬಾಲಕರಲ್ಲಿ ಸ್ವಾಭಾವಿಕವಾಗಿ ತಲೆದೋರುವುದು.

ಶಾಲೆಯು ಸ್ವಾಭಾವಿಕ ಸಮಾಜವೂ ಅಹುದು, ಕೃತ್ರಿಮ ಸಮಾಜವೂ ಅಹುದು. ಆದುದರಿಂದ, ಶಾಲೆಯ ಸಂಘಟನೆಯ ಸಮಸ್ಯೆಗಳಿಗೆ ಸಮರ್ಪಕವಾದ ಉತ್ತರಗಳನ್ನು ಕೊಡುವುದು ಬಹಳ ಕಠಿಣ.

## ೪. ಹಗಲು ಶಾಲೆ ಮತ್ತು ವಸತಿಗೃಹ ಶಾಲೆ

ಹಗಲು ಶಾಲೆ ಮತ್ತು ವಸತಿಗೃಹ ಶಾಲೆಗಳ ಸಮಸ್ಯೆಯನ್ನು ಇಲ್ಲಿ ನಿದರ್ಶನಕ್ಕಾಗಿ ತೆಗೆದುಕೊಳ್ಳಬಹುದು. ವಸತಿಗೃಹ ಶಾಲೆಗಳು ಬಾಲಕ-ಬಾಲಕಿಯರನ್ನು ತಂದೆ–ತಾಯಿಗಳ ಸ್ವಾಭಾವಿಕ ಪಾಲನೆ–ಪೋಷಣೆಯಿಂದ ದೂರ ಮಾಡುತ್ತಿವೆಯೆಂದು ಕೆಲವರು ಅವುಗಳನ್ನು ವಿರೋಧಿಸುತ್ತಾರೆ. ಆದರೆ ಉತ್ತಮ ವಸತಿಗೃಹ ಶಾಲೆಗಳಲ್ಲಿ ಸಾಮಾಜಿಕ ಜೀವನವು ಕೇಂದ್ರೀಕೃತವಾಗಿರುತ್ತದೆ. ಇದರಿಂದ ಬಾಲಕರು ಉತ್ತಮ ಸಾಮಾಜಿಕ ಶಿಸ್ತು ಕಲಿಯುತ್ತಾರೆ. ಈ ಸಂಗತಿಯು ವಸತಿಗೃಹ ಶಾಲೆಯ ಇತರ ದೋಷಗಳನ್ನೆಲ್ಲ ಪರಿಮಾಜಿಸುತ್ತದೆ. ಆದ್ದರಿಂದ ವಸತಿಗೃಹದ ಶಾಲೆಯು ಒಳ್ಳೆಯದೋ ಅಥವಾ ಹಗಲು ಶಾಲೆಯು ಒಳ್ಳೆಯದೋ ಎಂಬ ಸಮಸ್ಯೆಯನ್ನು ನಿರ್ಣಯಿಸುವುದು ಸುಲಭವಿಲ್ಲ. ಹಗಲು ಶಾಲೆಯನ್ನೇ ಹಲವರು ಈಚೆಗೆ ಪುರಸ್ಕರಿಸುತ್ತಾರೆ. ಆದರೂ ವಸತಿಗೃಹ ಶಾಲೆಗಳ ಹಲವು ಉತ್ತಮ ಜೀವನಾಂಶಗಳನ್ನು ಹಗಲು ಶಾಲೆಯಲ್ಲಿ ಬೆರೆಸುವ ಪ್ರಯತ್ನಗಳು ನಡೆದಿವೆ. ಇತ್ತ ಹಗಲು ಶಾಲೆಯ ಉತ್ತಮ ಜೀವನಾಂಶಗಳನ್ನು ವಸತಿಗೃಹ ಶಾಲೆಗಳಲ್ಲಿ ಬೆರೆಸುವ ಪ್ರಯತ್ನಗಳೂ ನಡೆದಿವೆ.

## ೫. ಸಹಶಿಕ್ಷಣ

ಸಹಶಿಕ್ಷಣವು ಇನ್ನೊಂದು ಕಠಿಣ ಸಮಸ್ಯೆ. ಬಾಲಕ ಬಾಲಕಿಯರು ಪರಸ್ಪರರನ್ನು ಅರಿತುಕೊಳ್ಳಬೇಕು. ಸ್ವಾಭಾವಿಕ ವಾತಾವರಣದಲ್ಲಿ ಅವರು ಬೆಳೆಯಬೇಕು. ಚಿಕ್ಕವರಿರುವಾಗ ಅವರು ಆಟ–ಪಾಟಗಳನ್ನು ಕೂಡಿ ಆಡಬೇಕು; ನಕ್ಕು ಕೆಲೆಯಬೇಕು. ಇದರಿಂದ ಅವರ ಮನಸ್ಸಿನಲ್ಲಿ ಅಕಸ್ಮಾತ್ತಾಗಿ ಅನುಚಿತ ಲೈಂಗಿಕ ಉತ್ಸುಕತೆ ಉಂಟಾಗುವುದಿಲ್ಲ. ಸಹ ಶಿಕ್ಷಣದಿಂದ ಹೀಗೆ ಪವಿತ್ರ ಕುಟುಂಬ ಜೀವನದ ತಳಹದಿಯು ಭದ್ರವಾ

ಗುವುದೆಂದು ಹಲವು ಶಿಕ್ಷಣ ತಜ್ಞರು ಅಭಿಪ್ರಾಯಪಡುತ್ತಾರೆ. ಸಹಶಿಕ್ಷಣ ದಿಂದ ಬಾಲಕ ಬಾಲಕಿಯರ ಶೀಲ ಸ್ವಭಾವಗಳು ಉತ್ತಮಗೊಂಡು ಅವರ ನೈತಿಕ ಮಟ್ಟವು ಹೆಚ್ಚುವುದೆಂದು ಅವರು ಹೇಳುತ್ತಾರೆ. ಈ ವಿಚಾರಗಳನ್ನು ಕೇಳಿ ಕೆಲವು ಶಿಕ್ಷಣ ತಜ್ಞರು ತಲ್ಲಣಗೊಳ್ಳುತ್ತಾರೆ. ಬಾಲಕ ಬಾಲಕಿಯರು ಪ್ರಾಪ್ತವಯಸ್ಕರಾದಾಗ ಪರಸ್ಪರ ದೂರವಾಗಿರಲು ಇಚ್ಛಿಸುತ್ತಾರೆ. ಪರಸ್ಪರರ ಸಮ್ಮುಖದಲ್ಲಿ ಅವರು ಅಧೈರ್ಯ ಹೊಂದುತ್ತಾರೆ. ಬಾಲಕ ಬಾಲಕಿಯರ ಗುಣಧರ್ಮಗಳೂ ಸಹ ಭಿನ್ನವಾಗಿರುತ್ತವೆ. ಆದುದರಿಂದ ಅವರು ಭಿನ್ನ ಭಿನ್ನ ಅಭ್ಯಾಸಕ್ರಮಗಳನ್ನು ಅನುಸರಿಸುವುದು ಉತ್ತಮವೆಂದು ಸಹ ಶಿಕ್ಷಣದ ವಿರೋಧಿಗಳು ಅಭಿಪ್ರಾಯಪಡುತ್ತಾರೆ.

ಈ ಎರಡೂ ಭಿನ್ನಾಭಿಪ್ರಾಯಗಳನ್ನು ಸಮನ್ವಯಗೊಳಿಸುವ ಮೊದಲು ನಾವು ಸಹ ಶಿಕ್ಷಣವೆಂದರೇನು ಎಂಬುದನ್ನು ಪರಿಶೀಲಿಸುವಾ. ಸಹ ಶಿಕ್ಷಣ ವೆಂದರೆ ಬಾಲಕ ಬಾಲಕಿಯರು ಒಂದು ಶಾಲೆಯಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಸಮಪ್ರಮಾಣದಲ್ಲಿರಬೇಕು; ಸ್ತ್ರೀಪುರುಷರಿಬ್ಬರೂ ಶಿಕ್ಷಕ-ಶಿಕ್ಷಕಿಯರಾಗಿರ ಬೇಕು; ಅಭ್ಯಾಸಕ್ರಮವು ಒಂದೇಯಾಗಿರಬೇಕು. ಆಟ-ಪಾಟಗಳು ಸ್ವಲ್ಪ ಹೆಚ್ಚುಕಡಿಮೆ ಒಂದೇ ಬಗೆಯವಾಗಿರಬೇಕು; ಬಾಲಕ ಬಾಲಕಿಯರು ಕೂಡಿಯೇ ಆಡಬೇಕು; ಕೂಡಿ ಪಾಠಕಲಿಯಬೇಕು; ಒಬ್ಬರಿಗೊಬ್ಬರು ಕೂಡಿ ವ್ಯವಹರಿಸಲು ಸ್ವಾತಂತ್ರ್ಯವಿರಬೇಕು.— ಇಷ್ಟೆಲ್ಲ ಸೌಲಭ್ಯಗಳು ಇದ್ದಾಗ್ಗೆ ಒಂದು ಶಾಲೆಯು ಸಹ-ಶಿಕ್ಷಣವುಳ್ಳ ಶಾಲೆಯೆಂದೆನಿಸುವುದು.

ಹಿಂದಿನ ಕಾಲದಲ್ಲಿ ಭಾರತದಲ್ಲಿಯಾಗಲಿ ಇಲ್ಲವೆ ಇತರ ದೇಶಗಳಲ್ಲಿಯಾ ಗಲಿ ಈ ಬಗೆಯ ಸಹ-ಶಿಕ್ಷಣವು ಇತ್ತೆಂದು ಹೇಳಲು ಸಾಕಷ್ಟು ಆಧಾರಗಳಿಲ್ಲ. ಇಂದು ಯುರೋಪದ ಕೆಲವು ದೇಶಗಳಲ್ಲಿ ಮತ್ತು ಅಮೇರಿಕೆಯಲ್ಲಿ ಸಹ-ಶಿಕ್ಷ ಣವು ಪ್ರಚಲಿತವಿದೆ. ಭಾರತದಲ್ಲಿ ಇಂತಹ ಸಹ-ಶಿಕ್ಷಣದ ಪ್ರಯೋಗಗಳು ದುರ್ಲಭವಾಗಿವೆ. ಈಗ ನಮಗೆ ದೊರೆಯಬಹುದಾದ ಅನ್ಯದೇಶಗಳ ಸಹ-ಶಿಕ್ಷಣದ ಪ್ರಯೋಗಗಳ ಆಧಾರದಮೇಲೆ ಈ ಕೆಳಗಿನ ಸಿದ್ಧಾಂತಗಳಿಗೆ ಬರ ಬಹುದು:—

ಬಾಲ್ಯದಲ್ಲಿ ಸಹ-ಶಿಕ್ಷಣವು ಹಿತಕರವಾದದ್ದು ಮತ್ತು ಸಹಜವಾದದ್ದು. ಸಣ್ಣ ವಯಸ್ಸಿನಲ್ಲಿ ಬಾಲಕ ಬಾಲಕಿಯರ ಜೀವನದಲ್ಲಿ ಲೈಂಗಿಕ ಇಚ್ಛೆಯ

ತೊಡಕು ಇರುವುದಿಲ್ಲ. ಆದುದರಿಂದ ೧೨–೧೩ ವಯಸ್ಸಿನ ಕೆಳಗಿನ ಬಾಲಕ ಬಾಲಕಿಯರಿಗೆ ಸಹ–ಶಿಕ್ಷಣ ಕೊಡುವುದರಲ್ಲಿ ಯಾವ ಅಭ್ಯಂತರವೂ ಇಲ್ಲ. ಈ ಅಭಿಪ್ರಾಯವು ಜನತೆಯಲ್ಲಿ ಈಗೀಗ ದೃಢಪಟ್ಟಿದೆ.

ವಯಸ್ಸಿಗೆ ಬಂದ ಬಾಲಕ ಬಾಲಕಿಯರನ್ನು ಸಹ ಸಂಪೂರ್ಣವಾಗಿ ಬೇರ್ಪಡಿಸುವುದು ಅನುಚಿತವೆಂದು ಬಹುಜನರು ಅಭಿಪ್ರಾಯಪಡುತ್ತಾರೆ. ಬಾಲಕ ಬಾಲಕಿಯರ ಕೆಲವು ವಿಶಿಷ್ಟ ಗುಣಗಳಿಗೆ ಉಚಿತವಾದ ಕೆಲವು ಐಚ್ಛಿಕ ವಿಷಯಗಳನ್ನು ಸಾಮಾನ್ಯ ಅಭ್ಯಾಸಪತ್ರಿಕೆಯಲ್ಲಿ ಸೇರಿಸಬಹುದು. ಶಾಲೆಯ ಚಟುವಟಿಕೆಗಳಲ್ಲಿ ಬಾಲಕ ಬಾಲಕಿಯರು ಕೂಡಿ ಭಾಗವಹಿಸಲು ಸ್ವತಂತ್ರರಾಗಿದ್ದರೂ ಸಹ ಅವರ ಸಮ್ಮಿಲನವು ಸ್ವೇಚ್ಛೆಯದಿಸೆಗೆ ಹೋಗ ದಂತೆ ನೋಡಿಕೊಳ್ಳಬಹುದು. ಈ ಬಗೆಯ ಶಿಸ್ತು ಕಾಯ್ದುಕೊಂಡು ಹೋಗುವುದು ಅಷ್ಟೇನೂ ಕಠಿಣವೆನಿಸಲಿಕ್ಕಿಲ್ಲ.

ಆದರೆ ಭಾರತದ ಸಾಮಾಜಿಕ ಪದ್ಧತಿಯು ಸಹ–ಶಿಕ್ಷಣಕ್ಕೆ ಅನುಕೂಲ ವಾದುದಾಗಿಲ್ಲ. ಈ ಮಾತನ್ನು ಸಹ–ಶಿಕ್ಷಣದ ಪುರಸ್ಕರ್ತರು ಲಕ್ಷ್ಯದಲ್ಲಿಡ ಬೇಕು. ಏಕೆಂದರೆ, ಸಹ–ಶಿಕ್ಷಣದಿಂದ ಭಾರತದ ಸಾಮಾಜಿಕ ಪದ್ಧತಿಯ ಮೇಲೆ ಅಗಾಧವಾದ ಮತ್ತು ಅನಿರೀಕ್ಷಿತವಾದ ಪರಿಣಾಮಗಳು ಉಂಟಾಗದೇ ಇರಲಿಕ್ಕಿಲ್ಲ. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಸಹ–ಶಿಕ್ಷಣವು ಎಷ್ಟೇ ಸ್ವಾಭಾವಿಕ ವಾದುದೆಂದು ಕಂಡುಬಂದರೂ, ಸದ್ಯದ ಭಾರತದ ಸಾಮಾಜಿಕ ಸ್ಥಿತಿಯಲ್ಲಿ ಅದು ಅಪರಿಚಿತ ಜೀವನಪದ್ಧತಿಯಂತೆ ಭಾಸವಾಗುತ್ತದೆ.

ಈ ಬಗೆಯಾದ ಶಾಲೆಯ ಸಂಘಟನೆಯ ಸಮಸ್ಯೆಗಳನ್ನು ಎಲ್ಲರಿಗೂ ಒಪ್ಪಿತವಾಗುವಂತೆ ಬಿಡಿಸುವುದು ದುಸ್ಸಾಧ್ಯ. ಶಾಲೆಯನ್ನು ಸ್ವಾಭಾವಿಕ ಸಮಾಜವನ್ನಾಗಿ ಮಾಡಬಯಸಿದರೆ ಸಮಾಜದ ದೋಷಗಳು ಅದರಲ್ಲಿ ಸಮಾ ವೇಶವಾಗುತ್ತವೆ. ಅದನ್ನು ಕೃತ್ರಿಮ ಸಮಾಜವನ್ನಾಗಿ ಮಾಡಬಯಸಿದರೆ ಸಮಾಜದ ಹಲವು ನಿರ್ಮಲಾಂತಃಕರಣಗಳಿಗೆ ಅದು ಎರವಾಗುತ್ತದೆ.

## ೧೨. ವಿದ್ಯಾರ್ಥಿ ಮತ್ತು ಶಾಲೆ

ಶಾಲೆಯೆಂದರೆ ಸಮಾಜದಿಂದ ಆಯ್ದು ತೆಗೆದ ಉತ್ತಮ ಜೀವನಾಂಶ ಗಳ ಸಮ್ಮಿಲನ, ಹಾಗು ಉತ್ತಮ ವಾತಾವರಣಗಳುಳ್ಳ ಸಂಸ್ಥೆ. ಇಂತಹ ಉತ್ತಮ ವಾತಾವರಣದಲ್ಲಿ ಬಾಲಕನ ನಿರ್ಮಾಪಕ ಪ್ರವೃತ್ತಿಗಳಿಗೆ ಯಥಾರ್ಥ ಪೋಷಣೆಯು ದೊರೆಯುತ್ತದೆ. ಆದರಿಂದ ಬಾಲಕನ ವ್ಯಕ್ತಿತ್ವ ಪ್ರಕಟವಾಗಲು ಅವಕಾಶ ದೊರೆಯುತ್ತದೆ.

### ೧. ವಿದ್ಯಾರ್ಥಿಯನ್ನು ಪ್ರಗತಿ ಪಥಕ್ಕೆ ಒಯ್ಯುವ ಆಕರ್ಷಣೆಗಳು

ಶಾಲೆಯ ಈ ಕಲ್ಪನೆಯು ಹಲವು ಸಂದೇಹಗಳಿಗೆ ಇಂಬುಗೊಡುತ್ತದೆ. ವಿದ್ಯಾರ್ಥಿಯು ಶಾಲೆಯ ವಾತಾವರಣದೊಳಗಿಂದ ತನ್ನ ಮನಸ್ಸಿಗೆ ಬಂದು ದನ್ನು ತೆಗೆದುಕೊಂಡು ಮನಸ್ಸಿಗೆ ಬಾರದ್ದನ್ನು ಬಿಟ್ಟುಬಿಡಲು ಸ್ವತಂತ್ರನೋ ? ಒಂದುವೇಳೆ ಸ್ವತಂತ್ರನಿರುವನೆಂದು ಬಗೆದರೆ, ಶಿಕ್ಷಣವು ಅರಾಜಕತೆಯ ಮಾರ್ಗ ಹಿಡಿದಹಾಗೆ ಆಗಲಿಕ್ಕಿಲ್ಲವೆ ? ಇಂತಹ ಶೈಕ್ಷಣಿಕ ತತ್ವವು ವಿವೇಕ ವನ್ನು ಕೆರಳಿಸಲಿಕ್ಕಿಲ್ಲವೆ ? ಇದು ಬಾಲಕರ ಶೀಲಸ್ವಭಾವಗಳನ್ನು ಉತ್ತಮ ಗೊಳಿಸುವ ಬದಲು ಅಧೋಗತಿಗೆ ಒಯ್ಯಲಿಕ್ಕಿಲ್ಲವೆ ? ಒಂದುವೇಳೆ ಸ್ವತಂತ್ರ ನಿಲ್ಲವೆಂದು ಬಗೆದರೆ, ಇದುವರೆಗೆ ಪ್ರತಿಪಾದಿಸುತ್ತ ಬಂದ ತತ್ವವು ಬುರುಡೆಯ ಮಾತಾಗಲಿಕ್ಕಿಲ್ಲವೇ ?

ಸುದೈವದಿಂದ ಈ ಎರಡೂ ಬಗೆಯ ಸಂದೇಹಗಳಲ್ಲಿ ಮುಳುಗಿ ನಾವು ಪೇಚಾಡಬೇಕಿಲ್ಲ. ಮನುಷ್ಯನು ಅನುಕರಣಶೀಲ ಪ್ರಾಣಿ. ಈ ಮಾತು ಹಿರಿಯರಿಗಿಂತಲೂ ಕಿರಿಯರ ವಿಷಯದಲ್ಲಿ ಹೆಚ್ಚು ನಿಜವಿದೆ. ತನ್ನ ಸುತ್ತುಮುತ್ತಲಿನ ವಸ್ತುಗಳನ್ನು ತಿಳಿದುಕೊಳ್ಳುವ ಲವಲವಿಕೆಯು ಮಗುವಿ ನಲ್ಲಿ ಅತ್ಯಂತ ಪ್ರಬಲವಾಗಿರುತ್ತದೆ. ಈ ಲವಲವಿಕೆಯು ವಿವಿಧ ಸ್ವರೂ ಪದ್ದೂ ಆಗಿದೆ. ಪರರ ಚಟುವಟಿಕೆಗಳನ್ನು ನೋಡಿದಮೇಲೆ ತಾನೂ ಅವ ರಂತೆ ವರ್ತಿಸಬೇಕೆಂಬ ಪ್ರಬಲ ಇಚ್ಛೆಯನ್ನು ಅವನು ತಡೆಯಲಾರನು. ಆದು ದರಿಂದ, ಅವನಿಗೆ ಪ್ರಿಯಕರವಾದ ಜ್ಞಾನದಾಯಕ ಸ್ಥಿತಿಗತಿಗಳನ್ನು ಅವನ ಸುತ್ತಲೂ ನಿರ್ಮಿಸಿದುದಾದರೆ, ಅವನು ಸಹಜವಾಗಿ ಜ್ಞಾನಾರ್ಜನೆ ಮಾಡಿ ಕೊಳ್ಳಬಲ್ಲನು. ಓದು-ಬರೆಹ ಮತ್ತು ಗಣಿತಗಳಿಗೂ ಈ ಮಾತು ಅನ್ವಯಿ

ಸುತ್ತದೆ. ಮಗುವು ಈ ವಿಷಯಗಳ ಜ್ಞಾನ ಪಡೆದುಕೊಳ್ಳದೆ ಹೋದರೆ, ಆಧುನಿಕ ಜಗತ್ತು ಅವನ ಈ ಅಯೋಗ್ಯತೆಗಾಗಿ ಕಠಿಣ ದಂಡನೆಯನ್ನು ವಿಧಿಸುತ್ತದೆ. ಎಲ್ಲ ಸಣ್ಣಮಕ್ಕಳಿಗೂ ಈ ವಿಷಯಗಳು ಸಹಜವಾಗಿ ಪ್ರಿಯ ಕರವಾಗುವುದೆಂದು ಹೇಳಲು ಬರುವುದಿಲ್ಲ. ಆದರೆ ಜಾಣತನದ ಕಲಿಸುವಿಕೆ ಯಿಂದ ಇವುಗಳನ್ನು ಪ್ರಿಯಕರವನ್ನಾಗಿ ಮಾಡಬಹುದು. ಈ ವಿಷಯಗಳ ಉಪಯುಕ್ತತೆಯ ಮರ್ಮವನ್ನು ಸಣ್ಣಮಕ್ಕಳ ಮನಸ್ಸಿನಮೇಲೆ ಬಿಂಬಿಸು ವುದು ಸುಲಭ. ಬಾಲಕನು ದೊಡ್ಡವನಾದ ಹಾಗೆ ಅವನ ಜೀವನದಲ್ಲಿ ಇತರ ಆಕರ್ಷಣೆಗಳೂ ಮಹತ್ವದ ಪಾತ್ರ ವಹಿಸುತ್ತವೆ. ಇತರರಿಗೆ ಪರಿಚಿತವಿದ್ದ ಸಂಗತಿಯು ತನಗೆ ಗೊತ್ತಿಲ್ಲದಿದ್ದರೆ ಅವನು ನಾಚಿಕೆಪಟ್ಟುಕೊಳ್ಳುತ್ತಾನೆ; ತಾನು ಇತರರಿಗಿಂತಲೂ ಕೆಳತರಗತಿಯಲ್ಲಿ ಬಂದುದಾದರೆ ಅವನು ಒಳಗೊ ಳಗೇ ಕೊರಗುತ್ತಾನೆ; ತನ್ನ ಮನೆತನ ಮತ್ತು ಶಾಲೆಗಳ ಬಗ್ಗೆ ಅಭಿಮಾನ ತಾಳುತ್ತಾನೆ; ಕರ್ತವ್ಯ ಪರತೆಯ ಮಹತ್ವವನ್ನು ಅರಿತುಕೊಳ್ಳುತ್ತಾನೆ; ತನ್ನ ಶಿಕ್ಷಕರನ್ನು ಸಂತೋಷಗೊಳಿಸಲು ಪ್ರಯತ್ನಿಸುತ್ತಾನೆ; ಶಿಕ್ಷಕರ ಸಲಹೆ ಗಳನ್ನು ಸ್ವೀಕರಿಸುತ್ತಾನೆ; ಎಲ್ಲರಿಗೂ ಒಪ್ಪಿತವಾದ ಆಚರಣೆಯನ್ನೇ ಅವನು ಅನುಸರಿಸುತ್ತಾನೆ. ಇನ್ನೂ ದೊಡ್ಡವನಾದಮೇಲೆ, ಒಂದು ಐಚ್ಛಿಕ ವಿಷಯ ದಲ್ಲಿ ಪಾಂಡಿತ್ಯ ಪಡೆಯುವ ಕಾಲ ಒದಗುತ್ತದೆ. ಆಗ ಅವನಲ್ಲಿ ಇರಬಹು ದಾದ ಸಂಕುಚಿತ ಭಾವನೆಯು ಬಯಲಾಗುತ್ತದೆ. ಏಕೆಂದರೆ, ತನ್ನ ಮನಸ್ಸಿಗೆ ಒಗ್ಗದೆ ಇರುವ ಹಲವು ವಿಷಯಗಳನ್ನು ಅವನು ಅನಿವಾರ್ಯವಾಗಿ ಅಭ್ಯಸಿಸ ಬೇಕಾಗುತ್ತದೆ; ತನ್ನ ಐಚ್ಛಿಕ ವಿಷಯದಲ್ಲಿ ಪಾಂಡಿತ್ಯಪಡೆಯಲು ಉಳಿದ ವಿಷಯಗಳ ಸ್ಥೂಲ ಜ್ಞಾನವಿಲ್ಲದೆ ಸಾಧ್ಯವಿಲ್ಲೆಂಬುದು ಅವನಿಗೆ ಹೊಳೆಯು ತ್ತದೆ; ಇತಿಹಾಸ ಇಲ್ಲವೆ ವೈಜ್ಞಾನಿಕ ವಿಷಯಗಳನ್ನು ತೆಗೆದುಕೊಂಡವನಿಗೆ ಪರಭಾಷೆಗಳ ಜ್ಞಾನ ಅವಶ್ಯವೆಂದು ಕಂಡುಬರುತ್ತದೆ. ಹೀಗೆ ಅನೇಕಬಗೆಯ ಆಕರ್ಷಣೆಗಳು ಕಾಲಕಾಲಕ್ಕೆ ಬಾಲಕನ ಜೀವನದಲ್ಲಿ ಕಾರ್ಯ ಮಾಡುತ್ತವೆ. ಅವು ಅವನನ್ನು ಪ್ರಗತಿಯ ಪಥದಲ್ಲಿ ನೂಕಿಕೊಂಡು ಹೋಗುತ್ತವೆ.

### ೨. ವ್ಯಂಗ ಮನಸ್ಕ ಬಾಲಕನ ಸ್ವಾತಂತ್ರ್ಯ

ಹೀಗೆ ಶಾಲೆಯ ವಾತಾವರಣ ಮತ್ತು ಸಾಮಾಜಿಕ ಶಕ್ತಿಗಳು ನೂಕಿ ಕೊಂಡು ಹೋಗಬಯಸುವ ವಿದ್ಯಾಭ್ಯಾಸದೆಡೆಗೆ ಹೋಗಲು ಮನಸ್ಸಿಲ್ಲದ

ಬಾಲಕನ ಬಗ್ಗೆ ಏನು ಮಾಡಬೇಕೆಂದು ಓದುಗನು ಕೇಳಬಹುದು. ವಿದ್ಯಾಭ್ಯಾಸದ ಆಕರ್ಷಣೆಗೆ ಬಲಿಬೀಳಲಿಲ್ಲವೆಂಬಮಾತ್ರಕ್ಕೆ ಬಾಲಕನನ್ನು ಶಾಲೆಯಿಂದ ಹೊರಗೆ ಕಳಿಸುವುದು ಉಚಿತವೋ? ಅವನನ್ನು ಅಂಧಃಕಾರದಲ್ಲಿ ಬಿಟ್ಟುಬಿಡುವುದು ಒಳ್ಳೆಯದೋ? ಈ ಪ್ರಶ್ನೆಗಳಿಗೆ ಪ್ರತಿ ಪ್ರಶ್ನೆಯಿಂದ ಉತ್ತರಿಸಬಹುದು. ಮೇಲಿನ ಪ್ರಶ್ನೆಗಳಲ್ಲಿ ಸೂಚಿಸಲ್ಪಟ್ಟ ದುರ್ಘಟನೆಯು ಇಂದಿನ ಶಿಕ್ಷಣ ಪದ್ಧತಿಯಲ್ಲಿ ಎಂದೂ ಸಂಭವಿಸುವುದಿಲ್ಲವೋ? ನಿಜವಾಗಿ ನೋಡಿದರೆ, ಇಂತಹ ದುರ್ಘಟನೆಗಳು ನಿತ್ಯದ ಸಂಗತಿಗಳಾಗಿವೆ. ಆದರೆ ಹೀಗೆ ಪ್ರಶ್ನೆಗೆ ಪ್ರತಿಪ್ರಶ್ನೆಯಿಂದ ಉತ್ತರಿಸುವಾಗ ಸತ್ಯವನ್ನು ಮರೆಮಾಜಿಸುವ ಸಂಭವವಿದೆ. ಆದುದರಿಂದ, ಈ ಸಮಸ್ಯೆಯನ್ನು ನೇರವಾಗಿ ಎದುರಿಸುವುದು ಒಳಿತು. ನಮ್ಮ ಆದರ್ಶ ಶಾಲೆಯಲ್ಲಿ ವಿದ್ಯಾಭ್ಯಾಸದ ಬೇಕುಬೇಡಗಳನ್ನು ನಿರ್ಧರಿಸುವ ಕೊನೆಯ ಹಕ್ಕು ವಿದ್ಯಾರ್ಥಿಯು ಕಡೆಗಿದೆಯೆಂದು ಒಪ್ಪೋಣ. ಈ ಹಕ್ಕನ್ನು ಬಾಲಕನು ಪೂರ್ಣ ತಿಳುವಳಿಕೆಯಿಂದ ಉಪಯೋಗಿಸುತ್ತಿರುವನೋ ಹೇಗೆ ಎಂಬುದನ್ನು ಮೊದಲು ಶಿಕ್ಷಕನು ಪರೀಕ್ಷಿಸಬೇಕು. ಏಕೆಂದರೆ, ಕೆಲವುಸಲ ವಿದ್ಯಾರ್ಥಿಯು ಒಂದು ವಿಷಯವನ್ನು ಸದ್ಯ ಅಲಕ್ಷಿಸಿದಂತೆ ಕಂಡರೂ, ಮುಂದೆ ಅವನ ಒಲವು ಒಮ್ಮಿಂದೊಮ್ಮೆ ಆ ವಿಷಯದ ಕಡೆಗೆ ಹೊರಳುವುದುಂಟು. ಒಂದು ವೇಳೆ ಕೊನೆಯ ವರೆಗೆ ಆ ಅಭ್ಯಾಸವು ಅವನಿಗೆ ಅಪ್ರಿಯಕರವಾಗಿಯೇ ಉಳಿದುದಾದರೆ, ವಿದ್ಯಾರ್ಥಿಯ ಸ್ವಭಾವದ ಮೇಲೆ ಹಿಂಸೆ ಮಾಡುವುದಕ್ಕಿಂತಲೂ ಅವನಿಗೆ ಅದನ್ನು ಕಲಿಸುವುದನ್ನು ಬಿಟ್ಟುಬಿಡುವುದು ಒಳ್ಳೆಯದು. ದುರ್ಘಟನೆಯಂತೆ ಭಾಸವಾಗುವ ಇಂತಹ ಪ್ರಸಂಗಗಳು ಅಷ್ಟೇನೂ ಅಹಿತಕಾರಿಯಲ್ಲವೆನ್ನಲು ಬೇರೆ ಆಧಾರಗಳಿವೆ.

## ೩. ವ್ಯಂಗ ಬಾಲಕನ ಬಗ್ಗೆ ಜಗತ್ತಿನ ದೃಷ್ಟಿ

ಈ ಜಗತ್ತಿನಲ್ಲಿ ವಿವಿಧ ಬಗೆಯ ಮನೋವೃತ್ತಿಗಳಿವೆ. ಎಲ್ಲ ಬಗೆಯ ಮನೋವೃತ್ತಿಗಳಿಗೂ ಈ ಜಗತ್ತಿನಲ್ಲಿ ಬಾಳಲು ಸಮನಾದ ಹಕ್ಕು ಇದೆ. ಸಾಮಾನ್ಯವಾಗಿ ಬಾಲಕನ ಅಭಿರುಚಿಗಳು ವ್ಯಂಗವಾಗಿರುವುದಿಲ್ಲ; ಅವುಗಳಲ್ಲಿ ಒಂದು ಬಗೆಯ ಸಾಮರಸ್ಯವಿರುತ್ತದೆ. ಈ ಅಭಿರುಚಿಗಳ ಬೆಳವಣಿಗೆಯು ಶಿಕ್ಷಣವು ಮಾಡಬಹುದಾದ ಎಲ್ಲ ಕಾರ್ಯಗಳನ್ನೂ ಮಾಡಬಲ್ಲದು. ಒಬ್ಬ ವಿದ್ಯಾರ್ಥಿಯು ಶಾಲೆಯ ವಿದ್ಯಾಭ್ಯಾಸದಿಂದ ಒದಗುವ ಜ್ಞಾನಕ್ಕೆ ಎರವಾಗು

ವುದನ್ನು ಕಂಡು ಶಿಕ್ಷಕನು ಖೇದಪಡುವುದು ಸಹಜ. ಈ ಬಗೆಯ ಖೇದ ಪಡುವಿಕೆಯು ಕೇವಲ ಶಿಕ್ಷಕ ವೃತ್ತಿಯ ಮೂಢ ಭಾವನೆಯನ್ನು ವ್ಯಕ್ತಪಡಿಸುತ್ತದಲ್ಲದೆ, ಬಾಹ್ಯ ಜಗತ್ತಿನ ಅಭಿಪ್ರಾಯವನ್ನು ವ್ಯಕ್ತಪಡಿಸುವುದಿಲ್ಲ. ಬಾಲಕನು ಕೆಲವು ವಿಷಯಗಳಲ್ಲಿ ಮಾತ್ರ ಯೋಗ್ಯತೆಯನ್ನು ಪಡೆದರೆ ಸಾಕು; ಜಗತ್ತು ಅವನನ್ನು ಮನ್ನಿಸುತ್ತದೆ. ಉಳಿದ ಅನೇಕ ವಿಷಯಗಳ ಬಗ್ಗೆ ಇರುವ ಬಾಲಕನ ಅಜ್ಞಾನವನ್ನು ಜಗತ್ತು ವಿಶಾಲ ಹೃದಯದಿಂದ ಕಡೆಗಣಿಸುತ್ತದೆ. ಈ ಸಂದರ್ಭದಲ್ಲಿ ಎರಡು ಮಹತ್ವದ ಮಾತುಗಳನ್ನು ಲಕ್ಷ್ಯದಲ್ಲಿಡಬೇಕು:— ಮೊದಲನೆಯದು, ಶಿಕ್ಷಕನ ಹಿಂಸಾತ್ಮಕ ರೀತಿ ನೀತಿಗಳ ವಿರುದ್ಧ ಹೋರಾಡಿದ ಅಗಣಿತ ಬಾಲ್ಯದ ಬಂಡುಕೋರರು ತಮ್ಮ ಭಾವೀ ಜೀವನದಲ್ಲಿ ಅಗಾಧವಾದ ಯೋಗ್ಯತೆಯನ್ನು ಪಡೆದ ನಿದರ್ಶನಗಳಿವೆ; ಎರಡನೆಯದು, ಈ ಬಾಲ್ಯದ ಬಂಡುಕೋರರಲ್ಲಿ ಹಲವರು ಇಡೀ ಜಗತ್ತನ್ನೇ ತಮ್ಮ ಋಣದಲ್ಲಿ ಇರಿಸಿಹೋಗಿದ್ದಾರೆ. ಇಲ್ಲಿ ರವೀಂದ್ರ ಗುರುದೇವರ ನಿದರ್ಶನವನ್ನು ತೆಗೆದುಕೊಳ್ಳಬಹುದು. ಅವರು ಬಾಲ್ಯದಲ್ಲಿ ಶಾಲೆಯ ಪಟಾಂಗಣದೊಳಗೆ ತೋರಿಸಿದ ಮೌನ ವಿರೋಧವು ಯಾರ ಕಿವಿಗೂ ಮುಟ್ಟದೇ ಹೋಗಿತ್ತು. ತಮ್ಮ ಬಾಲ್ಯದ ವಿರೋಧಪರ ಕೃತಿಗಳ ಬಗ್ಗೆ ಅವರು ದೊಡ್ಡವರಾದ ಮೇಲೆ ಪ್ರಾಯಶ್ಚಿತ್ತವನ್ನು ವ್ಯಕ್ತಪಡಿಸಿಲ್ಲ. ಪ್ರತಿಯಾಗಿ, ಅವರು ಇಂದಿನ ಶಿಕ್ಷಣ ಪದ್ಧತಿಯನ್ನು ಅತ್ಯಂತ ಕಟುವಾಗಿ ಟೀಕಿಸಿದ್ದಾರೆ.

## ೪. ವಿವಿಧ ಬಗೆಯ ಶಿಕ್ಷಣದ ಅವಶ್ಯಕತೆ

ವಿವಿಧ ಬಾಲಕರಲ್ಲಿ ವಿವಿಧ ಬಗೆಯ ಯೋಗ್ಯತೆಗಳಿರುತ್ತವೆ; ವಿಶಿಷ್ಟ ಗುಣಗಳಿರುತ್ತವೆ; ವಿವಿಧ ಒಲವುಗಳಿರುತ್ತವೆ. ಒಂದೇ ಬಗೆಯ ಶಿಕ್ಷಣವು ಎಲ್ಲರ ಅವಶ್ಯಕತೆಗಳನ್ನು ಪೂರೈಸಲಾರದು. ಹಲವು ವ್ಯಕ್ತಿತ್ವಗಳು ಅತ್ಯಂತ ವಿಚಕ್ಷಣವಾಗಿರುತ್ತವೆ; ಇನ್ನೂ ಕೆಲವು ಸರಳವಾಗಿರುತ್ತವೆ. ಯಾವುದೇ ಒಂದು ವ್ಯಕ್ತಿತ್ವದ ಬೆಳವಣಿಗೆಯು ಅದಕ್ಕೆ ಪ್ರಿಯಕರವಾದ ಶೈಕ್ಷಣಿಕ ವಾತಾವರಣದಲ್ಲಿ ಮಾತ್ರ ಸಾಧಿಸಬಲ್ಲದು. ಅಂದಮೇಲೆ, ಸಣ್ಣ ಮಕ್ಕಳ ಸಲುವಾಗಿ ವಿವಿಧ ಬಗೆಯ ಶಿಕ್ಷಣವನ್ನೊದಗಿಸುವುದು ಅಗತ್ಯ. ಬುದ್ಧಿವಂತ ಜನಾಂಗಗಳು ಇಂತಹ ಏರ್ಪಾಡು ಮಾಡತೊಡಗಿವೆ. ಅದರಿಂದ

ಪ್ರತಿಯೊಬ್ಬ ಬಾಲಕನೂ ತನ್ನ ಸ್ವಭಾವಕ್ಕನುಗುಣವಾದ ಶಿಕ್ಷಣವನ್ನು ಆಯ್ದುಕೊಳ್ಳಲು ಅನುಕೂಲವಾಗುತ್ತದೆ. ಅಂದಾಗ್ಗೆ ಈ ಅಪರಿಪೂರ್ಣ ಜಗತ್ತಿನಲ್ಲಿ ಸಾಧ್ಯವಿದ್ದಮಟ್ಟಿಗೆ ಎಲ್ಲರಿಗೂ ಶೈಕ್ಷಣಿಕ ಸಮ ಅವಕಾಶವನ್ನು ಕಲ್ಪಿಸಿಕೊಟ್ಟಹಾಗೆ ಆಗುತ್ತದೆ. ಈಚೆಗೆ ಮುಂಬೈ ರಾಜ್ಯದಲ್ಲಿ ಮಾಧ್ಯಮಿಕ ಶಾಲೆಯ ಪ್ರಮಾಣ ಪತ್ರಿಕೆಯ ಪರೀಕ್ಷೆಗಾಗಿ ವಿವಿಧ ಐಚ್ಛಿಕ ವಿಷಯಗಳನ್ನು ಸೇರ್ಪಡೆ ಮಾಡಲಾಗಿದೆ, ಇದು ಈ ದಿಶೆಯಲ್ಲಾದ ಒಂದು ಸುಧಾರಣೆ. ವಿವಿಧ ವಿಷಯಗಳನ್ನು ಕಲಿಸಬಲ್ಲ ಶಾಲೆಗಳಿರದ ಹೊರತು ಈ ಸುಧಾರಣೆಯ ಲಾಭ ದೊರೆಯಲು ಸಾಧ್ಯವಿಲ್ಲ.

## ೫. ಶೈಕ್ಷಣಿಕ ಆದರ್ಶದ ಕನಸು

ಯಾವುದೊಂದು ಹೊಸ ಪದ್ಧತಿಯು ಹಳೆಯ ಪದ್ಧತಿಯ ಒಡಲೊಳಗಿಂದ ಹುಟ್ಟುತ್ತದೆ. ಭಾರತದ ಹಳೆಯ ಶಿಕ್ಷಣ ಪದ್ಧತಿಯು ರಾಜಕೀಯ ಪರತಂತ್ರತೆಯ ಮೇಲೆ ಕಟ್ಟಲ್ಪಟ್ಟಿತ್ತು. ಇಂದು ಭಾರತವನ್ನು ಬಲವಾದ ರಾಷ್ಟ್ರೀಯ ಭಾವನೆ ಮತ್ತು ಲೋಕಸತ್ತಾತ್ಮಕ ದೃಷ್ಟಿಕೋನಗಳಿಂದ ಬಿಗಿದು ಒಂದು ಮಾಡಬೇಕಾಗಿದೆ. ಅದಕ್ಕೆ ಇಂದು ಭಾಷೆ, ಸಂಸ್ಕೃತಿ ಮತ್ತು ವಿವಿಧ ಹಿತ ಸಂಬಂಧಗಳ ಸಮನ್ವಯ ಬೇಕಾಗಿದೆ. ಇದು ಸಾಧಿಸಬೇಕಾದರೆ ನಮ್ಮ ಆದರ್ಶ ಶಿಕ್ಷಣ ಪದ್ಧತಿಯ ಕನಸು ನನಸಾಗಬೇಕು.

"ಶಿಕ್ಷಕರು ಉತ್ತಮ ಶೀಲಸ್ವಭಾವಗಳುಳ್ಳ ಸ್ತ್ರೀಪುರುಷರಾಗಿರಬೇಕು. ಅವರು ಮೇಧಾವಿಗಳಿರಬೇಕು. ಆಡಳಿತೆಯ ಅಡಚಣೆಗಳೆಷ್ಟೂ ಇರಕೂಡದು. ಬಾಲಕರ ಯೋಗ್ಯತೆಗಳನ್ನು ಗೊತ್ತುಹಚ್ಚುವ ವಿಧಾನ ದೋಷ ರಹಿತವಾಗಿರಬೇಕು. ಸಮಾಜದ ಕಲುಷಿತ ಭಾವನೆಗಳಿಂದ ಶಾಲೆಯು ದೂರವಾಗಿರಬೇಕು. ಶಾಲೆಯಲ್ಲಿ ಉತ್ತಮ ಜೀವನ ಚಟುವಟಿಕೆಗಳಿಗಷ್ಟೇ ಸ್ಥಾನವಿರಬೇಕು. ನಕ್ಕು–ಕೆಲೆದು ವಿದ್ಯಾರ್ಜನೆ ಮಾಡಿಕೊಳ್ಳಲು ಬಾಲಕರಿಗೆ ಪೂರ್ಣ ಅವಕಾಶವಿರಬೇಕು."— ಇದು ನಮ್ಮ ಶೈಕ್ಷಣಿಕ ಕನಸು. ಈ ಕನಸು ನನಸಾಗುವುದೂ ಬಿಡುವುದೂ ನಮ್ಮ ವಾದಕ್ಕೆ ಸಂಬಂಧಪಟ್ಟ ವಿಷಯವಲ್ಲ. ಇಂದು ಇದ್ದುದಕ್ಕಿಂತಲೂ ಹೆಚ್ಚು ಒಳ್ಳೆಯದಾದ ವಸ್ತುವಿನ ಕಡೆಗೆ ದಾರಿತೋರಿಸುವುದು ಆದರ್ಶದ ಕರ್ತವ್ಯ. ಅದು ತೋರಿಸುವ ಮಾರ್ಗ ಸರಿಯಾಗಿದೆಯೋ ಇಲ್ಲವೋ ಎಂಬುದನ್ನು ಮಾತ್ರ ಪರೀಕ್ಷಿಸಬೇಕು. ಇದು

ವರೆಗೆ ಪ್ರತಿಪಾದಿಸಿದ ತತ್ತ್ವವು ಮಾನವನ ನಿಜವಾದ ಸ್ವಭಾವ ಮತ್ತು ಅವಶ್ಯ ಕತೆಗಳಮೇಲೆ ದೃಢವಾಗಿ ನಿಂತಿವೆಯೋ ಇಲ್ಲವೋ ಎಂಬುದನ್ನು ಓದುಗರು ನಿರ್ಣಯಿಸಬೇಕು.

## ೬. ನೂತನ ಜಗತ್ತಿನ ನಿರ್ಮಾಣಕಾರ್ಯದಲ್ಲಿ ಶಿಕ್ಷಣದ ಪಾತ್ರ

ನಮ್ಮ ಜೀವನಗಳನ್ನು ರೂಪುಗೊಳಿಸಿದ ನಾಗರಿಕತೆಯು ಒಂದು ಮರ ಣಾಂತಿಕ ದುರ್ಘಟನೆಯಿಂದ ಕೆಲವರ್ಷಗಳ ಹಿಂದೆ ಸ್ವಲ್ಪದರಲ್ಲಿ ಪಾರಾಗಿದೆ. ಈ ನಾಗರಿಕತೆಯ ಭವಿಷ್ಯವನ್ನು ಯಾರೂ ಅರಿತಿಲ್ಲ. ಅದು ಇಂದು ಅನೇಕ ಆಸೆಗಳನ್ನಿಟ್ಟುಕೊಂಡಿದೆ; ಆದರೆ ಆ ಆಸೆಗಳೆಲ್ಲ ನಿರಾಸೆಗಳಾಗಿ ಪರಿಣಮಿಸ ಬಹುದು. ಅದು ಇಂದು ಭಯಾನಕ ಕನಸುಗಳನ್ನೂ ಕಾಣುತ್ತಿದೆ; ಈ ಕನಸು ಗಳು ನಿಜವಾಗುವ ಅಂಜಿಕೆಯೂ ಇದೆ. ಇಂದಿನ ನಾಗರಿಕತೆಯು ಎದುರಿಗಿರುವ ಸಮಸ್ಯೆಗಳನ್ನು ನಾವು ನಮ್ಮ ಜೀವಮಾನದಲ್ಲಿ ಬಿಡಿಸುವ ಆಸೆಯಿಲ್ಲ; ಬಿಡಿಸಲು ಸಾಧ್ಯವಿದ್ದರೆ ಅವುಗಳನ್ನು ಮುಂದಿನ ಪೀಳಿಗೆಯವರೇ ಬಿಡಿಸಬಲ್ಲರು. ನಾವು ನಮ್ಮ ಸ್ಥಾನವನ್ನು ಬಿಟ್ಟು ತೆರಳಿದಮೇಲೆ ಮುಂದಿನ ಪೀಳಿಗೆಯವರು ಆ ಸ್ಥಾನ ದಲ್ಲಿ ನಾವು ಬಿಟ್ಟುಹೋದ ಕಾರ್ಯವನ್ನು ಕೈಕೊಳ್ಳುವರು. ನಾವು ಬಿಟ್ಟು ತೆರ ಳಿದ ಜಗತ್ತಿನ ತಳಹದಿಯಮೇಲೆಯೇ ನಮ್ಮ ಮಕ್ಕಳು ಹೊಸ ಜಗತ್ತನ್ನು ಕಟ್ಟ ಬಲ್ಲರು. ನಾವು ನಮ್ಮ ತಿಳಿಗೇಡಿತನದಿಂದ ಅವರನ್ನು ದುರ್ಮಾರ್ಗಕ್ಕೆ ಹಚ್ಚದಿ ದ್ದರೆ, ಅವರು ಹೊಸ ಜಗತ್ತನ್ನು ಕಟ್ಟುವಾಗ ನಾವು ಮಾಡಿದ ತಪ್ಪುಗಳನ್ನೇ ಮಾಡಲಿಕ್ಕಿಲ್ಲ. ನಮ್ಮ ಮಕ್ಕಳಲ್ಲಿ ಪರಿಶುದ್ಧ ನಿರ್ಮಾಪಕ ಶಕ್ತಿಗಳು ಹುದುಗಿವೆ. ಅವುಗಳಿಗೆ ನಾವು ತಾಳ್ಮೆಯಿಂದಲೂ ಜಾಣ್ಮೆಯಿಂದಲೂ ಮಾರ್ಗದರ್ಶನ ಮಾಡಿದೆವೆಂದರೆ, ಅವರ ವ್ಯಕ್ತಿತ್ವಗಳು ಸನ್ಮಾರ್ಗದಕಡೆಗೆ ಒಲಿಯಬಲ್ಲವು. ಇದ ರಿಂದ ಜಗತ್ತಿನಲ್ಲಿ ಇಂದು ಕವಿದಿರುವ ಕಾರ್ಗತ್ತಲೆಯು ಹರಿದು, ಪ್ರಗತಿಯ ಹೊಂಗಿರಣಗಳು ಮೂಡಿ, ನಮಗೆ ಕಾಣಸಿಗದ ಸುಂದರ ಜಗತ್ತು ನಿರ್ಮಾಣ ವಾಗಬಲ್ಲದು. ಈ ಭರವಸೆಯು ನಮ್ಮೆಲ್ಲರಿಗೂ ಚೇತನವನ್ನು ದಯಪಾಲಿಸಲಿ!

**ಜಯ ಹಿಂದ್**

ಪ್ರತಿಯೊಬ್ಬ ಬಾಲಕನೂ ತನ್ನ ಸ್ವಭಾವಕ್ಕನುಗುಣವಾದ ಶಿಕ್ಷಣವನ್ನು ಆಯ್ದುಕೊಳ್ಳಲು ಅನುಕೂಲವಾಗುತ್ತದೆ. ಅಂಪಾಗ್ಗೆ ಈ ಅಪರಿಪೂರ್ಣ ಜಗತ್ತಿನಲ್ಲಿ ಸಾಧ್ಯವಿದ್ದಷ್ಟುಟ್ಟಿಗೆ ಎಲ್ಲರಿಗೂ ಶೈಕ್ಷಣಿಕ ಸಮ ಅವಕಾಶವನ್ನು ಕಲ್ಪಿಸಿಕೊಟ್ಟಹಾಗೆ ಆಗುತ್ತದೆ. ಈಚೆಗೆ ಮುಂಬೈ ರಾಜ್ಯದಲ್ಲಿ ಮಾಧ್ಯಮಿಕ ಶಾಲೆಯ ಪ್ರಮಾಣ ಪತ್ರಿಕೆಯ ಪರೀಕ್ಷೆಗಾಗಿ ವಿವಿಧ ಐಚ್ಛಿಕ ವಿಷಯಗಳನ್ನು ಸೇರ್ಪಡೆ ಮಾಡಲಾಗಿದೆ. ಇದು ಈ ದಿಶೆಯಲ್ಲಾದ ಒಂದು ಸುಧಾರಣೆ. ವಿವಿಧ ವಿಷಯಗಳನ್ನು ಕಲಿಸಬಲ್ಲ ಶಾಲೆಗಳಿರದ ಹೊರತು ಈ ಸುಧಾರಣೆಯ ಲಾಭ ದೊರೆಯುಲು ಸಾಧ್ಯವಿಲ್ಲ.

## ೫. ಶೈಕ್ಷಣಿಕ ಆದರ್ಶದ ಕನಸು

ಯಾವುದೊಂದು ಹೊಸ ಪದ್ಧತಿಯು ಹಳೆಯ ಪದ್ಧತಿಯ ಒಡಲೊಳಗಿಂದ ಹುಟ್ಟುತ್ತದೆ. ಭಾರತದ ಹಳೆಯ ಶಿಕ್ಷಣ ಪದ್ಧತಿಯು ರಾಜಕೀಯ ಪರತಂತ್ರತೆಯ ಮೇಲೆ ಕಟ್ಟಲ್ಪಟ್ಟಿತ್ತು. ಇಂದು ಭಾರತವನ್ನು ಬಲವಾದ ರಾಷ್ಟ್ರೀಯ ಭಾವನೆ ಮತ್ತು ಲೋಕಸತ್ತಾತ್ಮಕ ದೃಷ್ಟಿಕೋನಗಳಿಂದ ಬಿಗಿದು ಒಂದು ಮಾಡಬೇಕಾಗಿದೆ. ಅದಕ್ಕೆ ಇಂದು ಭಾಷೆ, ಸಂಸ್ಕೃತಿ ಮತ್ತು ವಿವಿಧ ಹಿತ ಸಂಬಂಧಗಳ ಸಮನ್ವಯ ಬೇಕಾಗಿದೆ. ಇದು ಸಾಧಿಸಬೇಕಾದರೆ ನಮ್ಮ ಆದರ್ಶ ಶಿಕ್ಷಣ ಪದ್ಧತಿಯ ಕನಸು ನನಸಾಗಬೇಕು.

"ಶಿಕ್ಷಕರು ಉತ್ತಮ ಶೀಲಸ್ವಭಾವಗಳುಳ್ಳ ಸ್ತ್ರೀಪುರುಷರಾಗಿರಬೇಕು. ಅವರು ಮೇಧಾವಿಗಳಿರಬೇಕು. ಆಡಳಿತೆಯ ಅಡಚಣಿಗಳಿಷ್ಟೂ ಇರಕೂಡದು. ಬಾಲಕರ ಯೋಗ್ಯತೆಗಳನ್ನು ಗೊತ್ತುಹಚ್ಚುವ ವಿಧಾನ ದೋಷ ರಹಿತವಾಗಿರಬೇಕು. ಸಮಾಜದ ಕಲುಷಿತ ಭಾವನೆಗಳಿಂದ ಶಾಲೆಯು ದೂರವಾಗಿರಬೇಕು. ಶಾಲೆಯಲ್ಲಿ ಉತ್ತಮ ಜೀವನ ಚಟುವಟಿಕೆಗಳಿಗಷ್ಟೇ ಸ್ಥಾನವಿರಬೇಕು. ನಕ್ಕು–ಕೆಲೆದು ವಿದ್ಯಾರ್ಜನೆ ಮಾಡಿಕೊಳ್ಳಲು ಬಾಲಕರಿಗೆ ಪೂರ್ಣ ಅವಕಾಶವಿರಬೇಕು."— ಇದು ನಮ್ಮ ಶೈಕ್ಷಣಿಕ ಕನಸು. ಈ ಕನಸು ನನಸಾಗುವುದೂ ಬಿಡುವುದೂ ನಮ್ಮ ವಾದಕ್ಕೆ ಸಂಬಂಧಪಟ್ಟ ವಿಷಯವಲ್ಲ. ಇಂದು ಇದ್ದುದಕ್ಕಿಂತಲೂ ಹೆಚ್ಚು ಒಳ್ಳೆಯದಾದ ವಸ್ತುವಿನ ಕಡೆಗೆ ದಾರಿತೋರಿಸುವುದು ಆದರ್ಶದ ಕರ್ತವ್ಯ. ಅದು ತೋರಿಸುವ ಮಾರ್ಗ ಸರಿಯಾಗಿದೆಯೋ ಇಲ್ಲವೋ ಎಂಬುದನ್ನು ಮಾತ್ರ ಪರೀಕ್ಷಿಸಬೇಕು. ಇದು

ವರೆಗೆ ಪ್ರತಿಪಾದಿಸಿದ ತತ್ತ್ವವು ಮಾನವನ ನಿಜವಾದ ಸ್ವಭಾವ ಮತ್ತು ಅವಶ್ಯ ಕತೆಗಳಮೇಲೆ ದೃಢವಾಗಿ ನಿಂತಿದೆಯೋ ಇಲ್ಲವೋ ಎಂಬುದನ್ನು ಓದುಗರು ನಿರ್ಣಯಿಸಬೇಕು.

## ೬. ನೂತನ ಜಗತ್ತಿನ ನಿರ್ಮಾಣಕಾರ್ಯದಲ್ಲಿ ಶಿಕ್ಷಣದ ಪಾತ್ರ

ನಮ್ಮ ಜೀವನಗಳನ್ನು ರೂಪುಗೊಳಿಸಿದ ನಾಗರಿಕತೆಯು ಒಂದು ಮರ ಣಾಂತಿಕ ದುರ್ಘಟನೆಯಿಂದ ಕೆಲವರ್ಷಗಳ ಹಿಂದೆ ಸ್ವಲ್ಪದರಲ್ಲಿ ಪಾರಾಗಿದೆ. ಈ ನಾಗರಿಕತೆಯ ಭವಿಷ್ಯವನ್ನು ಯಾರೂ ಅರಿತಿಲ್ಲ. ಅದು ಇಂದು ಅನೇಕ ಆಸೆಗಳನ್ನಿಟ್ಟುಕೊಂಡಿದೆ; ಆದರೆ ಆ ಆಸೆಗಳೆಲ್ಲ ನಿರಾಸೆಗಳಾಗಿ ಪರಿಣಮಿಸ ಬಹುದು. ಅದು ಇಂದು ಭಯಾನಕ ಕನಸುಗಳನ್ನೂ ಕಾಣುತ್ತಿದೆ; ಈ ಕನಸು ಗಳು ನಿಜವಾಗುವ ಅಂಜಿಕೆಯೂ ಇದೆ. ಇಂದಿನ ನಾಗರಿಕತೆಯು ಎದುರಿಗಿರುವ ಸಮಸ್ಯೆಗಳನ್ನು ನಾವು ನಮ್ಮ ಜೀವಮಾನದಲ್ಲಿ ಬಿಡಿಸುವ ಆಸೆಯಿಲ್ಲ; ಬಿಡಿಸಲು ಸಾಧ್ಯವಿದ್ದರೆ ಅವುಗಳನ್ನು ಮುಂದಿನ ಪೀಳಿಗೆಯವರೇ ಬಿಡಿಸಬಲ್ಲರು. ನಾವು ನಮ್ಮ ಸ್ಥಾನವನ್ನು ಬಿಟ್ಟು ತೆರಳಿದಮೇಲೆ ಮುಂದಿನ ಪೀಳಿಗೆಯವರು ಆ ಸ್ಥಾನ ದಲ್ಲಿ ನಾವು ಬಿಟ್ಟುಹೋದ ಕಾರ್ಯವನ್ನು ಕೈಕೊಳ್ಳುವರು. ನಾವು ಬಿಟ್ಟು ತೆರ ಳಿದ ಜಗತ್ತಿನ ತಳಹದಿಯಮೇಲೆಯೇ ನಮ್ಮ ಮಕ್ಕಳು ಹೊಸ ಜಗತ್ತನ್ನು ಕಟ್ಟ ಬಲ್ಲರು. ನಾವು ನಮ್ಮ ತಿಳಿಗೇಡಿತನದಿಂದ ಅವರನ್ನು ದುರ್ಮಾರ್ಗಕ್ಕೆ ಹಚ್ಚದಿ ದ್ದರೆ, ಅವರು ಹೊಸ ಜಗತ್ತನ್ನು ಕಟ್ಟುವಾಗ ನಾವು ಮಾಡಿದ ತಪ್ಪುಗಳನ್ನೇ ಮಾಡಲಿಕ್ಕಿಲ್ಲ. ನಮ್ಮ ಮಕ್ಕಳಲ್ಲಿ ಪರಿಶುದ್ಧ ನಿರ್ಮಾಪಕ ಶಕ್ತಿಗಳು ಹುದುಗಿವೆ. ಅವುಗಳಿಗೆ ನಾವು ತಾಳ್ಮೆಯಿಂದಲೂ ಜಾಣ್ಮೆಯಿಂದಲೂ ಮಾರ್ಗದರ್ಶನ ಮಾಡಿದೆವೆಂದರೆ, ಅವರ ವ್ಯಕ್ತಿತ್ವಗಳು ಸನ್ಮಾರ್ಗದಕಡೆಗೆ ಒಲಿಯಬಲ್ಲವು. ಇದ ರಿಂದ ಜಗತ್ತಿನಲ್ಲಿ ಇಂದು ಕವಿದಿರುವ ಕಾರ್ಗತ್ತಲೆಯು ಹರಿದು, ಪ್ರಗತಿಯ ಹೊಂಗಿರಣಗಳು ಮೂಡಿ, ನಮಗೆ ಕಾಣಸಿಗದ ಸುಂದರ ಜಗತ್ತು ನಿರ್ಮಾಣ ವಾಗಬಲ್ಲದು. ಈ ಭರವಸೆಯು ನಮ್ಮೆಲ್ಲರಿಗೂ ಚೇತನವನ್ನು ದಯಪಾಲಿಸಲಿ!

**ಜಯ ಹಿಂದ್**